## ಗ್ರಂಥ ಸಂಪಾದನೆ

ಇಲ್ಲಿಯ ಕೃತಿಗಳನ್ನು ಸಂಪಾದಿಸುವಾಗ ಪ್ರಮುಖವಾಗಿ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ ಶ್ರೀ ಮಹಿಪತಿರಾಯರ ಕೃತಿಗಳು ಎಂಬ ಕೃತಿಯನ್ನು ಆಕರವನ್ನಾಗಿಟ್ಟುಕೊಂಡು ವಿಜಾಪುರದ ಶ್ರೀ ದ್ಯಾವಪ್ಪಯ್ಯ ಕಾಖಂಡಕಿ ಅವರ ಹತ್ತಿರವಿದ್ದ ಹಸ್ತಪ್ರತಿಗಳೊಂದಿಗೆ ಕೆಲವು ಪಾಠಾಂತರಗಳನ್ನು ಗುರುತಿಸಿ ಸಂಪಾದಿಸಲಾಗಿದೆ. ಹಲವಾರು ಹಸ್ತಪ್ರತಿಗಳನ್ನು ಶೋಧಿಸಿ ಇನ್ನಷ್ಟು ಅಧಿಕ ಕೃತಿಗಳನ್ನು ಸೇರಿಸಲಾಗಿದೆ. ಜೊತೆಗೆ ಅವರ ಮೂರು ಮಿಶ್ರಭಾಷಾ ಕೃತಿಗಳನ್ನು ಮಾದರಿಗಾಗಿ ಕೊಟ್ಟಿದೆ. ಈ ಕೃತಿಗಳನ್ನು ಸಂಪಾದಿಸಲು ಅನುವು ಮಾಡಿಕೊಟ್ಟ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೂ, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗೂ ಹಾಗು ಶ್ರೀ ದ್ಯಾವಪ್ಪಯ್ಯ ಹರಿದಾಸ ಕಾಖಂಡಕಿ ಶ್ರೀ ಅರ್.ಜಿ.ಹರಿದಾಸ ಇವರಿಗೂ ನನ್ನ ಕೃತಜ್ಞತೆಗಳು.

–ಕೃಷ್ಣ ಕೊಲ್ಹಾರಕುಲಕರ್ಣಿ.

# ಕೀರ್ತನೆಗಳ ಕ್ರಮಸೂಚಿ*



*ಕೀರ್ತನೆ ಸಂಖ್ಯೆ ೧–೩೩೩ ಭಾಗ ೧ ರಲ್ಲಿವೆ.

# ಅನುಬಂಧಗಳು

೧. ಕಠಿಣಶಬ್ದಗಳ ಅರ್ಥ
೨. ಟಿಪ್ಪಣಿಗಳು
೩. ಸಂಖ್ಯಾ ವಿಶಿಷ್ಟ ಪದಗಳು
೪. ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಸಾಂದರ್ಭಿಕ ಪೌರಣಿಕ ವ್ಯಕ್ತಿಗಳು
೫. ಕೀರ್ತನೆಗಳ ಅಕಾರಾದಿ

# ಅನುಬಂಧ–೧

## ಕಠಿಣ ಶಬ್ದಗಳ ಅರ್ಥ

**ಅ**

ಅರ್ಕಮಂಡಲ = ಸೂರ್ಯಮಂಡಲ
ಅಕ್ಕಿಸು = ಪಡೆದುಕೊಳ್ಳು
ಅಖರದಿಂದ = ಅಕ್ಕರೆಯಿಂದ
ಅಟಾಅಟ = ಡಂಭಾಚಾರ, ಅಟ್ಟಹಾಸ
ಅಡಕ = ಇಕ್ಕಟ್ಟು, ತೊಂದರೆ, ಒಳಗೊಂಡ
ಅಡಕು = ತುಂಬು
ಅಢಳ = ಹಿರಿದ
ಅರ್ತು = ಅರಿತು, ತಿಳಿದು
ಅರ್ಥಿ = ಅಪೇಕ್ಷೆ
ಅಧಿ = ನೆಲೆ
ಅನಕಾ = ಅಂತು , ವರೆಗೆ
ಅನಿಮಿಷದೃಷ್ಟಿ = ಎವಿಯಿಕ್ಕದ ದೃಷ್ಟಿ
ಅನುಷ್ಠಾನ = ಆಚರಣೆ
ಅನುಸಂಧಾನ = ಪ್ರಯೋಗ, ಸಾಧನೆ
ಅಪಾರ = ಅನಂತ
ಅಭ್ಯಂತ್ರ = ತೊಂದರೆ
ಅಮ್ಮಿ = ಮೊಲೆ
ಅಮ್ಮೆ = ಮೊಲೆ
ಅಮೂರ್ತಿ = ನಿರಾಕಾರ
ಅರಕ (ಅರ್ಕ) = ಸೂರ್ಯ
ಅರವು = ಅರಿವು, ತಿಳಿ
ಅರಹು = ಅರಿವು, ತಿಳಿ
ಅರಹುತ = ಅರ್ಹತೆ, ಯೋಗ್ಯತೆ
ಅವಧೂತ = ಎಲ್ಲವನ್ನು ಬಿಟ್ಟವನು, ಬೈರಾಗಿ
ಅರ್ವ = ಅರಿವು, ತಿಳಿ
ಅವಸರ = ಸಮಯ, ಬೇಗ
ಅಸಿಯಕಲ್ಲು = ಅರೆಯುವ ಕಲ್ಲು
ಅಳ್ಳು = ಅಳುಕು, ಹೆದರಿ
ಅಕ್ಷ = ಅಚ್ಚು
ಅಂಕುರ = ಚಿಗುರು
ಅಂದಣ = ಪಲ್ಲಕ್ಕಿ
ಅಂಧತ್ವ = ಕುರುಡುತನ
ಅಂಡಲಿ = ಗೋಳಾಡು, ಅಂಡಲೆಯುವುದು

**ಆ**

ಆಗಮ = ಶಾಸ್ತ್ರ
ಆಗರ = ಮನೆ
ಆಟ್ಟೆ = ಅಟ್ಟುಳಿ, ಹಿಂಸೆ

## ಗುರುಸ್ತುತಿ

### ೩೪೪

ಬಾರಯ್ಯ ಗುಣನಿಧಿಯೆ ಗುರುಭಾನುಕೋಟ್ಯುದಯ ಧ್ರುವ

ಗುರುವರ ಶಿರೋಮಣಿಯೆ ಕರುಣಾನಂದ ಖಣಿಯೆ
ಶರಣರಕ್ಷಕ ಸದ್ಗುಣಿಯೆ ಸುರತರು ಚಿಂತಾಮಣಿಯೆ ೧

ಸುಗಣನಹುದೋ ನಿರ್ಗುಣಿಯೆ ಸುಗಮ
ಸುಪಥದ ಸಾಧನಿಯೆ
ಭಕ್ತಜನಭೂಷಣಿಯೆ ಜಗತ್ರಯ ಜೀವನಿಯೆ ೨

ಮಹಾನುಭವದ ಜಾಗ್ರತಿಯೆ ಮಹಿಮರ ಘನ ಸ್ಫೂರುತಿಯೆ
ಮಹಿಪತಿ ಸ್ವಾಮಿ ಶ್ರೀಪತಿಯೆ ಸಹಕಾರ ಸುಮೂರುತಿಯೆ ೩

### ೩೪೫

ಬಾರೋ ನನ್ನ ಸ್ವಾಮಿ ಗುರು ಅಂತರ್ಯಾಮಿ
ಕರುಣಸಾರ ಬೀರುತಿಹ್ಯ ಶರಣಜನಪ್ರೇಮಿ ೧

ಬೇಡಿ ನಿನ್ನ ಕೊಂಬೆ ನಿನ್ನ ನೋಡಿ ಬಲಗೊಂಬೆ
ಕಡಿಯುಗಾಣಿಸುವ ನೀನೆ ಒಡಿಯ ನನಗೆಂಬೆ ೨

ಪಾದಪೂಜೆ ಮಾಡೆ ಸಾಧಿಸಿನ್ನು ನೋಡೆ
ಭೆದಿಸನುದಿನ ನಿಜಬೋಧ ಬೆರದಾಡೆ ೩

ಕಾಣಲಿಕ್ಕೆ ಉಬ್ಬೆ ನೆನದು ನಿಮ್ಮ ಕೊಬ್ಬ್ಯ
ನಾನು ನೀನೆಂಬಹಂಭಾವ ಇದೆ ಧಬೆ ೪

ಧ್ಯಾನ ನಿತ್ಯ ಪ್ರತಿಗೆ ದೀನ ಮಹಿಪತಿಗೆ
ಭಾನುಕೋಟಿತೇಜ ನೀನೆ ಬೇಕು ಸುಭಗುತಿಗೆ ೫

## ೩೪೬

ಅರಹು ಅಂಜನಾಗದನಕಾ
ಪರಗತಿ ದೊರೆಯದು ಗುರುಕೃಪೆ ಆಗದನಕಾ ಧ್ರುವ

ಕಣ್ಣುಕಂಡು ಕಾಣದನಕಾ
ಅನುಮಾನ ಹೋಗದು ಉನ್ಮನವಾಗದನಕಾ
ಜ್ಞಾನ ಉದಯವಾಗದನಕಾ
ಮನ ಬೆರಿಯದು ಘನಮಯಾಶ್ಚರ್ಯವಾಗದನಕ ೧

ತನ್ನೊಳು ತಾ ತಿಳಿಯದನಕಾ
ಭಿನ್ನವಳಿಯದು ಅನುಭವ ಸುಖ ಹೊಳೆಯದನಕಾ
ನೆನವು ನೆಲೆ ಗೊಳ್ಳದನಕಾ
ಘನಪ್ರಭೆಯು ಹೊಳಿಯದು ಧ್ಯಾನ ನಿಜವಾಗದನಕ ೨

ಏರಿ ತ್ರಿಪುರ ನೋಡದನಕಾ
ಗುರುಮಹಿಮೆ ತಿಳಿಯದು ತಾ ದೃಢಗೊಳ್ಳದನಕಾ
ಮುರು ಹರಿಯಗುಡದನಕಾ
ಹರಿಯದು ಜನ್ಮಗುರುಚರಣವ ನೋಡದನಕಾ ೩

## ೩೪೭

ಅರ ಹು ನೀಡೊ ನೀ ಸ್ವಾಮಿ ಶ್ರೀನಿಧೇ
ಶರಣ ರಕ್ಷಕಾಗಿರಬೇಕಿದೆ

ತರಣೋಪಾಯಕೆ ಸಾರಸುಖವಿದೆ
ಕರುಣಿಸೊ ದಯ ಗುರುಕೃಪಾನಿಧೆ ೧

ತ್ವರನೆ ತಿಳಿಯದೆ ಬರಿದೆ ಭ್ರಮಿಸಿದೆ
ಕರುವ್ವುದೋರೋ ನೀ ಸ್ಮರಣಿ ಅಹುದೆ ೨

ಸೆರಗು ಶಿಲುಕವಾ ಪರಮ ಪುಣ್ಯಿದೆ
ಕರುಣಿಸೊ ದಯ ಗುರು ಕೃಪಾನಿಧೆ ೩

## ೩೪೮

ಅರುಕ್ಯುಳ್ಳ ಗುರುಪಾದವಾಶ್ರೈಸೊ ಎನ್ನ ಮನವೆ
ಎರವಾಗ್ಯನುಭವ ಸುರಕಿ ಕೊಳ್ಳೊ ಧ್ರುವ

ಮರಹುಮರದೀಡ್ಯಾಡಿ ಅರಹುವಿನೊಳರಿತು ಗೂಡಿ
ಕುರುಹ ಗುರುತುಮಾಡಿ ಸ್ಥಿರವು ಕೂಡಿ ೧

ತಿರಹು ಮರ್ಗವಿನ ಖೂನ ಅರಹು ಮರ್ಗವಿನ ಸ್ಥಾನ
ಇರಹು ಆಗೀಹ್ಯ ಘನ ಬೆರಿಯೋ ಧ್ಯಾನಾ ೨

ಜೀವ ಶಿವರಸಂದು ಠಾವಮಾಡಲು ಬಂದು
ಭವಕ ಬೀಳುವನೆಂದು ಭಾವಿಕನೆಂದು ೩

ಜಾಗ್ರನಿದ್ರಿಯ ಮಧ್ಯಮಾರ್ಗದ ಸುಖಸಾಧ್ಯ
ಅಗ್ರಗುರು ಸುವಿದ್ಯ ಶೀಘ್ರಸಾಧ್ಯ ೪

ಕೀಲು ತಿಳಿದರೆ ಸಾಕು ಜಾಲವ್ಯಾತಕೆ ಬೇಕು
ಮೂಲಗುರುಪಾದ ಮಹಿಪತಿ ನೀ ಸೋಂಕು ೫

## ೩೪೯

ಅಲ್ಲಿಂದಲ್ಲೆದೆಮಾ ಅಲ್ಲಿಂದಲ್ಲೆದೆ ಘನಗುರುಮಹಿಮೆ ಧ್ರುವ

ಅಲ್ಲಿಂದಲ್ಲಿದ್ದು ತಿಳಿಯದು ಲೋಕಾ ೧

ಅಲ್ಯಾವನಾದರ ಅಲ್ಲೆವೇ ತಿಳಿದಾ ೨

ಬಲ್ಲಮಹಿಮರ ಬಲಗೊಂಡು ಕೇಳಿ ೩

ಒಳಗಲ್ಲ ಹೊರಗಲ್ಲ ಒಳಿತಾಗಿ ಕೇಳಿ ೪

ಕೆಳಗಲ್ಲ ಮ್ಯಾಲಲ್ಲ ತಿಳಿದುಕೊಂಡು ನೋಡಿ ೫

ಹಿಂದಲ್ಲ ಮುಂದಲ್ಲ ಸಂಧಿಸಿ ನೋಡಿ ೬

ಎಡಕಲ್ಲ ಬಲಕಲ್ಲ ಪಡಕೊಂಡು ನೋಡಿ ೭

ದೂರಲ್ಲ ಸಾರ‍್ಯಲ್ಲ ಅರಿತಿನ್ನು ನೋಡಿ ೮

ಬೆಡಗಿನ ಮಾತಲ್ಲ ಕಡಗಂಡು ನೋಡಿ ೯

ಸ್ಥೂಲಲ್ಲ ಸೂಕ್ಷ್ಮಲ್ಲ ಭೇದಿಸಿ ನೋಡಿ ೧೦

ಮನದಿರಗಿ ಉನ್ಮನವಾಗಲಿಕ್ಕೆ ೧೧

ಕಣ್ಣದಿರಗಿ ಕಣ್ಣ ನೋಡಲಿಕ್ಕೆ ೧೨

ಎಚ್ಚತ್ತು ಅಲ್ಲಿವೆ ಯೋಚಿಸಲಿಕ್ಕೆ ೧೩

ಅರವಿನ ಮುಂದ ಮರವಿನ ಹಿಂದ ೧೪

ಜಾಗ್ರ ನಿದ್ರಿ ಮಧ್ಯ ಅರುವಾಗಲಿಕ್ಕೆ ೧೫
ಗುರುಕೃಪೆಯಿಂದಲಿ ಗುರುತಿಟ್ಟು ನೋಡಿ ೧೬
ಸಾಧಕನಾದರ ಸಾಧಿಸಬಹುದಿದು ೧೭
ಭೇದಿಸೇನೆಂದರೆ ಭೇದಿಸಬಹುದಿದು ೧೮
ಸೂರ‍್ಯಾಡೇನಂದರ ಸೂರ‍್ಯಾಡಬಹುದಿದು ೧೯
ಖೂನಹೇಳಿದ ಮ್ಯಾಲ ಜ್ಞಾನೇನಬಹುದು ೨೦
ಹೆಜ್ಜೆ ಹೇಳಿದ ಮ್ಯಾಲ ಸಜ್ಜನ ಅವನೀಗ ೨೧
ಚೆನ್ನಾಗ್ಹೇಳಿದ ಮ್ಯಾಲ ಮನ್ನಿಸಬಹುದಿದು ೨೨
ಗುರುತಹೇಳಿದ ಮ್ಯಾಲ ಗುರುಸ್ವರೂಪ ತಾಂ ೨೩
ಸರಗಹೇಳಿದ ಮ್ಯಾಲ ಶರಣೆಂಬುದಾತಗ ೨೪
ಅಲ್ಲಿಂದಲ್ಲೆಂಬುದನುಭವಾಗಬೇಕು ೨೫
ಅನುಭವದೋರಿದ ಘನಗುರು ನಮ್ಮಯ್ಯ ೨೬
ಲೇಸು ಲೇಸು ನಮ್ಮ ಭಾಸ್ಕರ ಗುರುದಯ ೨೭
ಭಾಸುತ ಭಾಸ್ಕರಕೋಟಿ ತೇಜಾದನು ೨೮
ದಾಸಮಹಿಪತಿಗೆ ಲೇಸು ಲೇಸಾಯಿತು ೨೯

## ೩೫೦

ಅವಧೂತಾ ನೀ ಅವಗುಣಗಳ ನಿರ್ಧೂತಾ
ದೇವನಹುದೋ ಶ್ರೀನಾಥಾ ಧ್ರುವ

ಭಾವಿಸಿ ನೋಡಲು ಭಾವಕತೀತ
ಭವಹರ ಗುರು ಸಾಕ್ಷಾತ

ಪಾವನಗೈಸುವದಯ ಪ್ರಖ್ಯಾತ
ದೇವಾದಿಗಳೊಂದಿತ ೧

ಝುಗಝುಗಿಸುವ ಜಗಜ್ಯೋತಿ ಸ್ವರೂಪ
ಅಗಣಿಗತುಣೋಪಮೋಪ
ತ್ರಿಗುಣರಹಿತ ಚಿದ್ಘನ ಚಿದ್ರೂಪ
ಯೋಗಿಜನರ ಪಾಲಿಪ ೨

ಇಹಪರದಾತ ಮಹಿಪತಿ ಗುರುನಾಥ
ಬಾಹ್ಯಾಂತ್ರ ಸದೋದಿತ
ಮಹಾಮಹಿನು ನೀ ಆನಂದಭರಿತ
ಸಹಕಾರ ನೀ ಸತತ ೩

## ೩೫೧

ಇಕ್ಕೊ ಇಲ್ಲೆಹಾನೆ ಅಖಂಡ ಗುರುತಾನೆ
ಬೇಕಯೆಂದವರಿಗೆ ಪೂರ್ಣ ಸಿಕ್ಕುತಾನೆ ಧ್ರುವ

ಅರವ್ಹಿನ ಮುಂಧಾನೆ ಮರವ್ಹಿನ ಹಿಂಧಾನೆ
ಕುರಹು ತಿಳಿದರೆ ತಾನೆ ಸ್ಥಿರವಾಗ್ಯಾನೆ ೧

ಗುರುತ ಕಂಡವಘಾನೆ ಗುರುಸ್ವರೂಪಧ್ಯಾನೆ
ಗುರುಕೃಪ್ಯಾದವಘಾನೆ ಗುರುತಾನೆ ೨

ಅಣುರೇಣುದೊಳಘಾನೆ ಜನವನ ತುಂಬ್ಯಾನೆ
ಅನುಭವಕ ತಾನೆ ಖೂನಾಘ್ಯಾನೆ ೩

ಮನದ ಕೊನಿಲಿಹಾನೆ ಘನವೆ ಘನವಾಘ್ಯಾನೆ
ದೀನ ಮಹಿಪತಿ ಸ್ವಾಮಿ ತಾನೆ ತಾನೆ ೪

## ೩೫೨

ಇಕ್ಕೊ ಇಲ್ಲೆವೆ ಅದ ನಿಜಧನಾ
ತಕ್ಕೊಂಬುದು ಬಲುಕಠಿಣ ಧ್ರುವ

ಅದಕೊಂದದ ಉಪಾಯ ನೋಡಿ
ಸದ್ಗುರುಪಾದಕ ಮನಗೂಡಿ
ಒದಗಿ ಬಾಹುದು ತಾಂ ಕೈಗೂಡಿ
ಇದೇ ಸಾಧಿಸಿ ಸುಖ ಸೂರ್‍ಯಾಡಿ ೧

ಎಡಬಲಕ ತಾಂ ತುಂಬೇದ
ದೃಢಮನಕ ತಾಂ ಸಿದ್ಧದ
ಮೂಢಜನರಿಗಿದೇ ದೂರದ
ನೋಡೇನೆಂದರ ಬಲು ಸಾರ್‍ಯದ ೨

ಗುರುಪಾದಲ್ಯದ ಧನಸಮಸ್ತ
ಅರಿತುಕೊಂಬುದು ಮನಮಾಡಿ ಸ್ವಸ್ಥ
ತರಳಮಹಿಪತಿಗಿದೆ ಸುಪ್ರಸ್ತ
ಗುರುನಾಥನೆ ತಾಂ ಸುವಸ್ತಾ ೩

## ೩೫೩

ಇಕ್ಕೊ ಇಲ್ಲೆ ನೋಡಿ ಸಿಕ್ಕುತ್ತದೆ ನಿಜಗೂಡಿ ಧ್ರುವ

ತಿಳಿಯಲು ತನ್ನ ಅಳುವುದು ಭಿನ್ನ
ಒಳಹೊರಗದೆ ಪ್ರಸನ್ನ
ಬೆಳಗು ಅಭಿನ್ನ ಹೊಳೆವದು
ಸುಳಹು ಸದ್ಗುರು ಪಾವನ್ನ ೧

ತನ್ನೊಳು ತಿಳಿದವನೆ ತಾನುಳಿದ
ಉನ್ಮನಿವಸ್ತಿಯೊಳಳಿದಾ
ಮುನ್ನಿನ ಕರ್ಮವ ನಿಲ್ಲದೆದೊಳದಾ
ಚನ್ನಾಗವೆ ಭವಗಳೆದಾ ೨

ಇದು ನಿಜ ಖೂನ ಸಾಧಿಸು ಜ್ಞಾನ
ಬುಧ ಜನರ ಸುಪ್ರಾಣ
ಭೇದಿಸು ಮಹಿಪತಿ ನಿನ್ನೊಳು ಪೂರ್ಣ
ಇದೇ ಸದ್ಗುರು ಕರುಣ ೩

## ೩೫೪

ಇಕ್ಕೊ ಇಲ್ಲೆ ಹಾನೆ ಸಕಲ ಪಾಲಕ ತಾನೆ
ಭಕುತಿ ನಿಜವಾಗಲಿಕೆ ಪ್ರಕಟವಾಗತಾನೆ ಧ್ರುವ

ನೋಡೇನೆಂದರೆ ಬನ್ನಿ ದೃಢಭಾವಕೆ ತನ್ನಿ
ಒಡನೆ ತನ್ನೊಳು ನೋಡಲಿಕ್ಕೆ ಜಯಜಯವೆನ್ನಿ ೧

ಪಡೆದುಕೊಳ್ಳಿ ಖೂನವಿಡಿದು ಗುರುಜ್ಞಾನ
ಬಿಡದೆ ಭಾಸುತಾನೆ ಒಡಿಯ ನೋಡಿ ನಿಜಸ್ಥಾನ ೨

ಹಿಡಿಯಬೇಕು ಬ್ಯಾಗ ಜಡಿದು ಮನಯೋಗ
ಕುಡುವಾ ಮಹಿಪತಿ ಗುರು ಸ್ವಾನುಭವಭೋಗ ೩

## ೩೫೫

ಇದು ಪರಬ್ರಹ್ಮದ ನೆಲೆಯು ಇಹಪರವೆಂಡನು ಗೆಲು
ವದು ಗುರು ಕರುಣಾನಂದದ ಬೆಳಗಹುದಹುದು ಧ್ರುವ

ಆದಿ ಅನಾದಿಯಾ ಹಾದಿಬ್ಯಾರಿದು ಗಾದಿಯ
ಮಾತಿಗೆ ದೊರೆಯದಿದು
ಸಾಧಿಸಿ ಸಾಧಿಸಿ ಅನುದಿನ ತನ್ನೊಳು
ಭೇದಿಸದಲ್ಲದೆ ಕಾಣಿಸದು
ಕಾಂಬುವ ಕಾಣಿಕಿ ತನ್ನೊಳು ಕಂಡರೆ
ಮುನ್ನಬಾರನು ಕಾಣಿಕಿಗೆಂದು
ಕಾಣುವ ಕಾಣಿಕಿ ಗುರುಜ್ಞಾನಗಳಿಲ್ಲದೆ ನರಗುರಿಗಳಿಗಿದು
ಅಳವಹುದೆ ೧

ಯೋಗದ ಆಟವು ಬ್ಯಾಗನೆ ತಿಳಿಯದು
ಸದ್ಗತಿಮೋಕ್ಷವು ಮಾರಗವು
ಸಾಭ್ಯಸ್ತವಾಗದೆ ಸಾಕ್ಷಾತ್ಕಾರದಿ ಪ್ರತ್ಯಕ್ಷ ಪ್ರಮಾಣವಿವು
ಇದು ಎಂದಿಗೆ ತಿಳಿಯದು ಭೇದಕನಲ್ಲದೆ ಸೋಹ್ಯ ಸೊನ್ನೆಯ
ಅತಿಸೂಕ್ಷ್ಮವು ನೆಲೆನಿಭ ನಿಜವಿದು
ಮತಿಹೀನರಿಗಿದು ಅಳವಹುದೆ ೨

ನಿತ್ಯಯತಿರಾಯ ಶ್ರೀಗುರು ಭಾಸ್ಕರಮುನಿ
ಲೋಲ್ಯಾಡುವ ನಿಜ ಮಂದಿರವು
ಮಂಡಿಯಾ ಮರೆಯಲಿ ಕಂಡಿಹ್ಯ ಮಹಿಪತಿ
ಭೂಮಂಡಲದೊಡೆಯನ ಚರಣಕಮಲವಿದು
ಮುಟ್ಟಿ ಕಂಡಿಹ್ಯ ಬ್ರಹ್ಮನಂದದ ನೆಲೆ ಕರುಣಾಳು
ಒಡಿಯನ ಕೃಪಾದೃಷ್ಟಿಯಿದು
ಅತಿ ಅನಂದದಿ ಕರವ ಮುಗಿದು ಬೇಡಿಕೊಂಬೆನು
ಮನದೊಳು ತ್ರಾಹಿ ತ್ರಾಹಿ ಎನುತಲಿನ್ನು ೩

## ೩೫೬

ಇದು ಬಲು ಸುಖದಾಟ ಸಾಧಿಸಿ ನೋಡಿರೋ ನೀಟ ಧ್ರುವ

ಕರ್ಮಕಮಂಥವಿಲ್ಲ ವರ್ಮ ತಿಳಿದವ ಬಲ್ಲ
ಧರ್ಮ ಗುರುವಿನ ಸರಿ ಇಲ್ಲ ನಿರ್ಮಲ ನಿಜವೆಲ್ಲ ೧

ಅನುಭವಕನುಭವದ ಅನಂದೋ ಬ್ರಹ್ಮದ ಬೋಧ
ಏನೇಂದ್ಹೇಳಲಿ ಸುಸ್ವಾದ ತಾನೆ ತಾನಾದ ೨

ಸಾಧಿಸಿದಲ್ಲದೆ ಖೂನ ಇದರಿಟ್ಟು ಮಹಿಪತಿ ಪೂರ್ಣ
ಒದಗಿ ಕೈಗೂಡದು ಧನ ಸದ್ಗುರು ಚರಣ ೩

## ೩೫೭

ಇದೇವೆ ಗುರುಕೃಪೆಯದಾಟಗಳು ಧ್ರುವ

ತನುವಿನೊಳು ಘನಕೌತುಕದೋರುವ
ಮನಯೋಗದ ಗೋಲ್ಹಾಟಗಳು
ಅನುಭವದಾಟವು ಅನುದಿನ ನೋಡುವ
ಅನಿಮಿಷ ನಯನದ ನೋಟಗಳು
ಅನಂದಮಯ ಘನತುಂಬಿ ತುಳುಕುತಿಹ್ಯ
ಜ್ಞಾನ ಸಮುದ್ರದ ಲೋಟಗಳು
ಏನೇಂದ್ಹೇಳಲಿ ಸ್ವಾನಂದದ ಸುಖ ಅನಂದೋಬ್ರಹ್ಮದ ಆಟಗಳು ೧

ಘೇಳೆನಿಸುವ ಶ್ರುತಿ ಆಲಿಸುವದಿದು ಸೋಹ್ಯ
ಸೊನ್ನೆಯ ಸೂಟಿಗಳು
ತಾಳಮೃಂದಗವು ಭೇರಿಡುತಿಹ್ಯ ಕೇಳುವ ಧಿಮಿಧಿಮಿಟಗಳು
ತಲ್ಲೀನದಿ ಶ್ರುತಿಘೋಷಾಲಿಸುವನೀದೃಶ್ಯದ ಉದಾಟಗಳು
ಹೇಳಲಿಬಾರದು ನಾದೋಧ್ವನಿಗಳು
ತಿಳಿಯಲು ಬಲು ಆವ್ಹಾಟಗಳು ೨

ಭಾವಬಯಲಾಟದ ನಿಜಸುಖವಿದು
ಬಲ್ಲವೇನು ನರಕೀಟಗಳು
ಭವಬಂಧನ ನಿರ್ಮೂಲವು ಮಾಡುವ
ದೇವದೇವೋತ್ಮನ ನೋಟಗಳು
ದಯಕರುಣದಿ ಜೀವನ ಸಧ್ಗೈಸುವ ಭವನಾಶನ ಕೃಪಾದೃಷ್ಟಿಗಳು
ಪಾವನ್ನವಾಯಿತು ಮಹಿಪತಿ ಜನ್ಮವು
ಧನ್ಯಧನ್ಯ ಕುಲಕೋಟಿಗಳು ೩

## ೩೫೮

ಇದೇವೆ ಗುರು ಘನ ಮಹಿಮೆ ಧ್ರುವ

ಅಧ್ಯಾತ್ಮದಾನಂದದ ನೆಲೆನಿಭ ಮಹಾತ್ಮರು ಬಲ್ಲರು ಖೂನ
ಸಂತತ ಸದಮಲ ಸದ್ಗುರುವಿನ ಕೃಪೆ
ಹೊಳೆಯುತಿಹ್ಯದು ಅನುದಿನ

ಚಿಂತಾಯಕ ಗುರು ಘನ ಪ್ರತಾಪವು ತುಂಬಿಹ್ಯದು ಪರಿಪೂರ್ಣ
ಶುದ್ಧಾಂತ್ಮದ ಸೂತ್ರಾಂತ್ರದ ಗತಿಗಳ ಮೂಢಾತ್ಮರು ಬಲ್ಲವೇನ ೧

ಮಹಾನುಭವಗತಿಸುಖ ಅನುಭವಿಸುವ
ಮಹಿಮರು ಮನಿಮನಿಗಿಲ್ಲ
ಮಹಿಮಾನಂದದನು ಸಂಧಾನ ಪರಮವಿರಕ್ತನೇ ಬಲ್ಲ
ಜೀವನ್ಮುಕ್ತಾಗುವ ಗತಿ ಮಾರ್ಗವು ಎಂದಿಗೆ ದೊರೆವದಿದೆಲ್ಲ
ಪೂರ್ವಕಲ್ಪನೆಯಲ್ಲ ಮಿಕ್ಕಿನಾ ನರಗುರಿಗಳಿಗಿದು ಇಲ್ಲ ೨

ಹುರಳಿಲ್ಲದ ಕರ್ಮಾಚರಣೆಯೊಳು ಮರುಳಾದರು ಜನವೆಲ್ಲ
ಪರಮಾನಂದದ ಗತಿ ಸಾಯೋಜ್ಯವು
ಸರ್ವರಿಗಾವುದಲ್ಲ ಪೂರ್ವಾ
ಪಾರ ಮಹಾಗುರು ಯೋಗಮಾರ್ಗವು ಸ್ತುತಿಸಲೆನಗಳವಲ್ಲ
ನರಕೀಟಕ ಮಹಿಪತಿ ತಾರಕ ಗುರುದೋರುತಿಹ್ಯ
ಸರ್ವಮಯವೆಲ್ಲ ೩

## ೩೫೯

ಇದೇ ದೇವ ಪೂಜಿಯು ನೋಡಿ
ಹೃದಯದಲಿ ನಿಜ ಒಡಗೂಡಿ ಧ್ರುವ

ಮೂರ್ತಿಎಂಬುದೆ ಅಮೂರ್ತಿ
ನಾಮರೂಪ ನಿಜ ಗುಹ್ಯವಾರ್ತಿ
ವ್ಯೋಮಾಕಾರದ ಮನೆಮೂರ್ತಿ
ಸ್ವಾಮಿ ಸದ್ಗುರುವಿನ ಕೀರ್ತಿ ೧

ನಿತ್ಯನಿರ್ಗುಣ ನಿರ್ವಿಕಲ್ಪ
ಸತ್ಯಸದ್ಗುರು ಸ್ವರೂಪ
ನಿತ್ಯ ನಿತ್ಯದಿತ್ಯರ್ಥ ಸುದೀಪ
ತತ್ವಜ್ಞಾನ ಮನಮಂಟಪ ೨

ಸ್ವಾನುಭವ ಸ್ವಾದೋದಕ
ಜ್ಞಾನ ಭಾಗೀರಥಿ ಅಭಿಷೇಕ
ಮೌನ ಮೌನ್ಯ ವಸ್ತ್ರಾಮೋಲಿಕ
ಧಾನ್ಯವೆಂಬುದೆ ಸೇವಿ ಅನೇಕ ೩

ಗಂಧಾಕ್ಷತಿ ಪರಿಮಳ ಫಲಪುಷ್ಪ
ಬುದ್ಧಿ ಮನವಾಯಿತು ಸ್ವರೂಪ
ಸದ್ವಾಸನ್ಯಾಯಿತು ಧೂಪ ದೀಪ
ಸದ್ಭಾವನೆ ನೈವೇದ್ಯ ಮೋಪ ೪

ಫಲತಾಂಬೂಲವೆ ಸದ್ಭಕ್ತಿ
ಮೂಲಜೀವ ಭಾವನೆ ಮಂಗಳಾರ್ತಿ
ಬಾಲಕ ಮಹಿಪತಿ ನಿಜಪೂಜಿಸ್ಥಿತಿ
ಕುಲಕೋಟಿ ಉದ್ಧರಿಸುವ ಗತಿ ೫

## ೩೬೦

ಇದೇ ಜ್ಞಾನವೊ ಇದೇ ಮಾನವೊ ಧ್ರುವ

ಕೇಳಿ ಕೇಳಿ ಕೇಳಿ ಕೇಳುವ ಮಾತಿದು
ಕೇಳಿದಂತೆ ನೀವು ಬಾಳಿ
ಬಾಳಿದ ಮ್ಯಾಲಿನ್ನು ಹೇಳ್ಯಾಡುವ ಮಾತಿನ
ಮೊಳೆ ಅಂಕುರನೆ ಸೀಳಿ
ತಾಳದಲಿನ್ನೊಂದು ಬೆಳಸ್ಯಾಡುವ ಯುಕ್ತಿ
ಒಳಿತಾಗಿದೆ ಪೂರ್ಣ ಕೇಳಿ
ಕಳೆದ ದುಸ್ಸಂಗವು ಕೇಳುವನಾದರೆ
ತಿಳಿಸಿಕೊಡುವನು ಗುರು ಹೇಳಿ ೧

ಸೂಟಿ ತಿಳಿದು ನಿಜಧಾಟಿಗೆ ಬಂದರೆ
ಕೋಟಿಗವನೇ ಒಬ್ಬ ಜ್ಞಾನಿ

ನೀಟಾಗಿಪ್ಪ ಘನಕೂಟವು ತಿಳಿದರೆ
ನೋಟದಲ್ಲವ ಬಲು ತ್ರಾಣಿ
ನೋಟದಲ್ಲಿಹುದು ತ್ರಾಟಿವ ಬಲ್ಲನೆ
ಬೂಟಕ ದೇಹಾಭಿಮಾನಿ
ನಾಟಿ ಮನದೊಳು ಮಾಟಿಸಿಕೊಂಬುದು
ಘಟಿಸಿತಿದೆ ಸಾಧನ ೨

ನೆನೆಯಲಿಕ್ಕೆ ಮನ ಘನಬೆರದಾಡುವ
ಖೂನಾಗುವದಿದೆ ರಾಜಯೋಗ
ಅನುಭವಿಗಳಿಗೆ ಅನುಕೂಲವಾಗಿನ್ನು
ಅನುವಾಗಿದೋರುದು ಬ್ಯಾಗ
ಭಾನುಕೋಟಿತೇಜ ತಾನೆತಾನಾದನು
ಎನ್ನ ಮನದೊಳು ಈಗ
ದೀನ ಮಹಿಪತಿಗೆ ಸನಾಥಮಾಡುವ
ಸ್ವಾನುಭವದ ಬ್ರಹ್ಮಭೋಗ ೩

## ೩೬೧

ಇದೇ ನಮ್ಮ ವೃತ್ತಿ ಸದ್ಗುರುಭಾವಭಕ್ತಿ ಧ್ರುವ

ಇದೇ ನಮ್ಮ ಮನೆಯ ಸದ್ಗುರು ಸ್ಮರಣೆಯ
ಇದೇ ನಮ್ಮ ವರ್ತನೆಯು ಸದ್ಗುರು ಪ್ರಾರ್ಥನೆಯು ೧

ಇದೇ ನಮ್ಮ ಗ್ರಾಮ ಸದ್ಗುರು ದಿವ್ಯನಾಮ
ಇದೇ ನಮ್ಮ ಸ್ತೋಮ ಸದ್ಗುರು ಆತ್ಮಾರಾಮ ೨

ಇದೇ ನಮ್ಮ ಭೂಮಿ ಸದ್ಗುರು ಘನಸ್ವಾಮಿ
ಇದೇ ನಮ್ಮ ಸೀಮಿ ಸದ್ಗುರು ಅಂತರ್ಯಾಮಿ ೩

ಇದೇ ನಮ್ಮ ದೇಶ ಸದ್ಗುರು ಉಪದೇಶ
ಇದೇ ನಮ್ಮಭ್ಯಾಸ ಸದ್ಗುರು ಜಗದೀಶ ೪

ಇದೇ ನಮ್ಮ ವಾಸ ಸದ್ಗುರು ಸಮರಸ
ಇದೇ ನಮ್ಮ ಗ್ರಾಸ ಸದ್ಗುರು ಪ್ರೇಮರಸ ೫

ಇದೇ ನಮ್ಮ ವ್ಯವಸನ ಸದ್ಗುರು ನಿಜಧ್ಯಾಸ
ಇದೇ ನಮ್ಮ ಆಶೆ ಸದ್ಗುರು ಸುಪ್ರಕಾಶ ೬

ಇದೇ ನಮ್ಮಾಶ್ರಮ ಸದ್ಗುರು ನಿಜದ್ಯಾಸ
ಇದೇ ನಮ್ಮುದ್ದಿಮೆ ಸದ್ಗುರು ಸಮಾಗಮ ೭

ಇದೇ ನಮ್ಮ ಭಾಗ್ಯ ಸದ್ಗತಿ ಸುವೈರಾಗ್ಯ
ಇದೇ ನಮ್ಮ ಶ್ಲಾಘ್ಯ ಸದ್ಗುರು ಪಾದಯೋಗ್ಯ ೮

ಇದೇ ನಮ್ಮ ಕುಲವು ಸದ್ಗುರು ದಯದೊಲವು
ಇದೇ ನಮ್ಮ ಬಲವು ಸದ್ಗುರು ದಯಜಲವು ೯

ಇದೇ ನಮ್ಮಾಭರಣ ಸದ್ಗುರು ದಯ ಕರುಣ
ಇದೇ ದ್ರವ್ಯ ಧನ ಸದ್ಗತಿ ಸಾಧನ ೧೦

ಇದೇ ನಮ್ಮ ಕಾಯ ಸದ್ಗುರುವಿನುಪಾಯ
ಇದೇ ನಮ್ಮ ಮಾಯ ಸದ್ಗುರುವಿನ ಅಭಯ ೧೧

ಇದೇ ನಮ್ಮ ಪ್ರಾಣ ಸದ್ಗುರು ಚರಣ
ಇದೇ ನಮ್ಮ ತ್ರಾಣ ಸದ್ಗುರು ದರುಶನ ೧೨

ಇದೇ ನಮ್ಮ ಜೀವ ಸದ್ಗುರು ವಾಸುದೇವ
ಇದೇ ನಮ್ಮ ದೇವ ಸದ್ಗುರು ಅತ್ಮಲೀವ್ಹ ೧೩

ಇದೇ ನಮ್ಮ ನಾಮ ಸದ್ಗುರು ಸದೋತ್ತಮ
ಇದೇ ನಮ್ಮ ನೇಮ ಸದ್ಗುರು ಸರ್ವೋತ್ತಮ ೧೪

ಇದೇ ನಮ್ಮ ಕ್ಷೇತ್ರ ಸದ್ಗುರು ಬಾಹ್ಯಂತ್ರ
ಇದೇ ನಮ್ಮ ಗಾತ್ರ ಸದ್ಗುರು ಘನಸೂತ್ರ ೧೫

ಇದೇ ನಮ್ಮ ತೀರ್ಥ ಸದ್ಗುರು ಸಹಿತಾರ್ಥ
ಇದೇ ನಮ್ಮ ಸ್ವಾರ್ಥ ಸದ್ಗುರು ಪರಮಾರ್ಥ ೧೬

ಇದೇ ನಮ್ಮ ಮತ ಸದ್ಗುರು ಸುಸನ್ಮತ
ಇದೇ ನಮ್ಮ ಪಥ ಸದ್ಗುರುಮಾರ್ಗ ದ್ವೈತ ೧೭

ಇದೇ ನಮ್ಮ ವೇದ ಸದ್ಗುರು ಶ್ರೀಪಾದ
ಇದೇ ನಮ್ಮ ಸ್ವಾದ ಸದ್ಗುರು ನಿಜಬೋಧ ೧೮

ಇದೇ ನಮ್ಮ ಗೋತ್ರ ಸದ್ಗುರು ಸರ್ವಾಂತ್ರ
ಇದೇ ನಮ್ಮ ಸೂತ್ರ ಸದ್ಗುರು ಚರಿತ್ರ ೧೯

ಇದೇ ಸದ್ಯ ಸ್ನಾನ ಸದ್ಗುರು ಕೃಪೆ ಜ್ಞಾನ
ಇದೇ ಧ್ಯಾನ ಮೌನ ಸದ್ಗುರು ನಿಜಖೂನ ೨೦

ಇದೇ ಜಪತಪ ಸದ್ಗುರು ಸ್ವಸ್ವರೂಪ
ಇದೇ ವೃತ್ತುದ್ಯೋಪ ಸದ್ಗುರು ಸುಸಾಕ್ಷೇಪ ೨೧

ಇದೇ ನಿಮ್ಮ ನಿಷ್ಠಿ ಸದ್ಗುರು ಕೃಪಾದೃಷ್ಟಿ
ಇದೇ ನಮ್ಮಾಭೀಷ್ಟಿ ಸದ್ಗುರು ದಯಾದೃಷ್ಟಿ ೨೨

ಇದೇ ಪೂಜ್ಯಧ್ಯಕ ಸದ್ಗುರು ಪ್ರತ್ಯಕ್ಷ
ಇದೇವೆ ಸಂರಕ್ಷ ಸದ್ಗುರು ಕಟಾಕ್ಷ ೨೩

ಇದೇ ನಮ್ಮ ಊಟ ಸದ್ಗುರು ದಯನೋಟ
ಇದೇ ನಮ್ಮ ಆಟ ಸದ್ಗುರು ಪಾದಕೂಟ ೨೪

ಮಾತೃಪಿತೃ ನಮ್ಮ ಸದ್ಗುರು ಪರಬ್ರಹ್ಮ
ಭ್ರಾತೃಭಗಿನೀ ನಮ್ಮ ಸದ್ಗುರು ಪಾದಪದ್ಮ ೨೫

ಇದೇ ಬಂಧು ಬಳಗ ಸದ್ಗುರುವೆ ಎನ್ನೊಳಗೆ
ಇದೇ ಸರ್ವಯೋಗ ಬ್ರಹ್ಮಾನಂದ ಭೋಗ ೨೬

ಇದೇ ಸರ್ವಸೌಖ್ಯ ಮಹಿಪತಿ ಗುರುವಾಕ್ಯ
ಇದೇ ನಿಜ ಮುಖ್ಯ ಸದ್ಗತಿಗಿದೆ ಐಕ್ಯ ೨೭

## ೩೬೨

ಇದೇ ನಮ್ಮ ಶ್ರೀ ಹರಿ ಕೀರ್ತನಿ
ಸಾಧು ಸಜ್ಜನರ ಮೃತಸಂಜೀವನಿ
ಸದ್ಗೈಸುವ ದಿವ್ಯ ಸುಸಾಧನಿ
ಸದ್ಗುರು ಸುಮೂರ್ತಿ ಪ್ರಾರ್ಥನಿ ಧ್ರುವ

ಶಮದಮವೆಂಬೆರಡು ತಾಳಗೂಡಿ
ಪ್ರೇಮ ಭಾವನೆ ಧ್ರುಪದಿಗಳ ಮಾಡಿ
ಸಮರಸವೆ ಮೃದಂಗವಿದು ನೋಡಿ
ಸಮದೃಷ್ಟಿಲಿವೆ ನಾಮ ಕೊಂಡಾಡಿ ೧

ಸಾವಧಾನವೆಂಬ ನಿರೋಪಣಿ
ನಿವಾಂತ ಕೇಳು ವಿಚಾರಣಿ
ಈ ವಾಕ್ಯಬಲ್ಲ ಲಕ್ಷಕೊಬ್ಬ ಜ್ಞಾನಿ
ಭಾವ ಬಲ್ಲುದೆ ಮುಖ್ಯ ಸಾಧನಿ ೨

ಮನಸ್ವಸ್ತ ಮಾಡಿ ನೀವಿನ್ನು ಕೇಳಿ
ಅನುಮಾನ ಬಿಟ್ಟಿ ಇಕ್ಕಿ ಚಪ್ಪಾಳಿ

ಗನಗುರು ಪಾದದಲ್ಯೊಮ್ಮೆ ಹೊರಳಿ
ಹಣೆಗ್ಹಚ್ಚಿಕೊಂಬಾ ಗುರುಪಾದಧೂಳಿ ೩

ಚಿತ್ತ ಚಂಚಲಾಗ ಬಾರದು ನೋಡಿ
ವಸ್ತು ಬಾಹುದು ಬ್ಯಾಗೆ ಕೈಗೂಡಿ
ಮಿಥ್ಯಾ ಪ್ರಪಂಚ ಈಡ್ಯಾಡಿ
ನಿತ್ಯ ನಿರ್ಗುಣಾನಂದ ಸ್ತುತಿಪಾಡಿ ೪

ಪುಣ್ಯಕೀರ್ತನೆ ಕೇಳಿ ಸಂಭ್ರಮ
ಧನ್ಯ ಧನ್ಯ ಕೇಳಿದವರ ಜನ್ಮ
ಕಣ್ಣಾರೆ ಕಾಂಬುವ ನಿಜವರ್ಮ
ಚಿಣ್ಣ ಮಹಿಪತಿಗಾನಂದೋ ಬ್ರಹ್ಮ ೫

## ೩೬೩

ಇದೇ ನಿತ್ಯನಮಸ್ಕಾರ ನೋಡಿ ಗುರುಚರಣಕೆ ಮನಗೂಡಿ ಧ್ರುವ

ಬಿಡದಿಹುದೇ ಸತ್ಸಂಗಾ
ನೋಡಿ ಇದೇವೆ ಶಿರಸಾಷ್ಟಾಂಗಾ
ಕಡದ್ಹೋಯಿತು ಭವದುಸ್ಸಂಗಾ
ದೃಢಮಾಡಿ ಅಂತರಂಗಾ ೧

ನಮ್ರುತಲಿಹುದೆ ನಮನಾ
ಪ್ರೇಮಭಾವೆಂಬುದು ಪ್ರದಕ್ಷಿಣಾ
ನೇಮದಿಂದ ನಡೆದವರು ದಿನಾ
ಬ್ರಹ್ಮಾನಂದದೋರುವ ಸಾಧನ ೨

ಗುರ್ವಿನಂಘ್ರಿಗೆ ಎಡೆಮಾಡಿ
ಅರ್ವಿನೊಳಾದ ಮಹಿಪತಿ ನೋಡಿ
ಗರ್ವ ಪುಣ್ಯೆಂಬುದು ಈಡ್ಯಾಡಿ
ಸರ್ವಪಾಪ ಹೋಯಿತು ನೋಡಿ ೩

## ३६४

ಇದೇ ನೋಡಿ ನಿಜ ಉಪಾಯ
ಸದಮಲ ಸುಖದಾಶದಾಶ್ರಯ ಧ್ರುವ

ಸಾಧನವಿಲ್ಲಿದೆ ಶ್ರೇಯಸುಖ ಬ್ಯಾರದೆ ಕೇಳತಿಸೂಕ್ಷ್ಮ ಮಾತು
ಭೇದಿಸಿ ನೋಡೇನೆಂದರೆ ತಿಳಿದೀತು ಸಾಧಿಸಿ ಕೈಗೊಟ್ಟಿತು ೧

ಗೋವಗೋಂತಲ್ಲದೆ ಬ್ಯಾರೆದೆ ಘನ ಭಾವಿಸದೆ ನಿಜಖೂನಾ
ಸಾವಧವಾದವಗಿದೇನಿಧಾನ ಭವಹರ ಗುರುಕರುಣಾ ೨

ತಾನೆಂಬುದರೊಳು ತಾನೆತಾನಾಗೇದ ಭಾನುಕೋಟಿ ಉದಿತ
ದೀನ ಮಹಿಪತಿಸ್ವಾಮಿಯು ಸಾಕ್ಷಾತಾನಂದ ಘನಭರಿತಾ ೩

## ३६५

ಇದೇ ನೋಡಿರೋ ನಮ್ಮ ಊಟ ಮೇದಿನೊಯೊಳು ಪ್ರಗಟ ಧ್ರುವ

ಪ್ರೇಮ ತಟ್ಟಿ ಬಟ್ಟಲು ತಳಗಿ ಕಾಮಕ್ರೋಧ ಸುಟ್ಟುಬೆಳಗಿ
ನಾಮಸಾರಘೃತದೊಳು ಮುಳಗಿ
ನೇಮದಿಂಡ ಬಡಸುವಾದಡಗಿ ೧

ಪಂಚಭಕ್ಷ ಪರಮಾನ್ನಾಮುಂಚೆ ಬಡಸುವದು ಗುರುವಚನ
ಮುಂಚೆದೋರಿತು ಮೃಷ್ಟಾನ್ನ ಸಂಚಿತ ಪುಣ್ಯಸಾಧನ ೨

ತತ್ವಸಾರದೊಂದೇ ತುತ್ತು ಅತಿಹರುಷಗೊಂಡಿತು
ನಿತ್ಯತೃಪ್ತಹೊಂದಿತು ಹಿತ ಮಹಿಪತಿಗಾಯಿತು ೩

## ೩೬೬

ಇದೇ ನೋಡಿರೋ ನಿಜನೋಡಿರೋ ಧ್ರುವ

ನೋಡಿನೋಡಿ ನೋಡಿ ನೋಡುದರೊಳು ಕೂಡಿ
ನೋಡುವದೇನೆಂದು ನೋಡಿ
ನೋಡಿದ ಮ್ಯಾಲಿನ್ನು ಮೂಡಿಬಂದರ ಘನ
ನೋಡುವದೇ ಖೂನ ಮಾಡಿ
ಮಾಡಿದ ಮಾಟವು ಕೂಡಿಬಂದರೆ ಕೈಯ
ನಾಡಗೂಡ ಹೇಳಬ್ಯಾಡಿ
ಗೂಢ ಗುಹ್ಯದ ಮಾತು ಒಡೆದು ಹೇಳುವದಲ್ಲಾ
ನೋಡಿ ನಿಮ್ಮೊಳು ಬೆರೆದಾಡಿ ೧

ಓದಿದರೋದಬೇಕಿದೊಂದೇ ಅಕ್ಷರ
ಭೇದಿಸುವಂತೆ ಬ್ರಹ್ಮಾಂಡ
ಇದೇ ಸಾಧಿಸಿನ್ನು ಮೂಲವ ತಿಳಿಯದೆ
ಓದುವದ್ಯಾಕೆ ಉದ್ದಂಡ
ಹಾದಿ ತಿಳಿಯದಿದ್ದರೆ ಹೇಳಿಕೊಡುವನು
ಸದ್ಗುರು ಘನಪ್ರಪಂಚ
ಭೋದಿಸಿ ಬ್ರಹ್ಮಾನುಸಂಧಾನದ ಸುಖ
ಉದಯ ಮಾಡುವ ಅಖಂಡ ೨

ನಾನ್ಯ ಪಂಥವೆಂಬ ಮಂತ್ರದನುಭವ
ಚನ್ನಾಗ್ಯಾಗಬೇಕು ಖೂನ
ಇನ್ನೊಂದು ಬ್ಯಾರೆಂಬ ಭಿನ್ನವಳಿದ ಮ್ಯಾಲೆ
ತನ್ನೊಳಾಯಿತು ಸಮ್ಯಕಜ್ಞಾನ
ಧನ್ಯ ಧನ್ಯ ಧನ್ಯ ಧನ್ಯಗೈಸುವದಿದು
ಕಣ್ಣಾರೆ ಕಾಂಬೊ ಸಾಧನ
ಉನ್ಮತವಾಗದೆ ಸನ್ಮತದೋರದು
ಇನ್ನೊಬ್ಬರ ಕೇಳುವದೇನ ೩

ಸರ್ವಮಿದಂ ಖಲು ಬ್ರಹ್ಮವೆಂಬುವ ಮಾತು
ದೋರ್ವಾಂಗೆ ನೆಲೆಗೊಳಬೇಕು
ಸರ್ವ ಸಾಕ್ಷಿ ಸರ್ವಾಧಾರವು ತಿಳಿಯದೆ
ಗರ್ವಿತಲ್ಯಾಡುವ ಮಾತು ಹೋತು
ಗುರ್ವಿನಂಘ್ರಿಗಿನ್ನು ಗುರುತವ ಕೇಳದೆ
ಮರ್ವಿನೊಳೀಹುದು ಮುಸುಕು
ನಿರ್ವಿಕಲ್ಪನ ನಿಜ ಸ್ಮರಿಸುವಾಂಗೆ ಕಣ್ಣ
ದೆರ್ವದಿದೊಂದೇ ಸಾಕು ೪

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಎಂದು
ಗುರುವಿಗೆ ಕೇಳಿ ನಿಜ ವಂದ
ದೇಹದ ಒಳಗಿಹ್ಯ ದ್ಯಾವರ ತಿಳಿದರ
ಜನ್ಮಕೆ ಬಂದುದು ಚಂದ
ಸೋಹ್ಯ ಸೊನ್ನೆಯ ಗುಹ್ಯವ ತಿಳಿದರ
ಹೋಗುದು ಭವ ಮೂಲದಿಂದ
ಬಾಹ್ಯಾಂತ್ರ ಪರಿಪೂರ್ಣ ಭಾಸುತಲ್ಯದೆ
ಮಹಿಪತಿಗಿದೆ ಬ್ರಹ್ಮಾನಂದ ೫

## ೩೬೭

ಇದೇ ನೋಡಿರೋ ಸಂಧ್ಯಾನ ಸದಾ ಆತ್ಮಾನುಸಂಧಾನ ಧ್ರುವ

ತಿಳಿಯದೆನಗೆ ತ್ರಿಕಾಲಾ ಹೊಳವುತಿಹ್ಯದು ಸೂರ್ಯಅಚಲಾ
ಕಾಳವ್ಯಾಳ್ಯಲ್ಲಿದಕ ಸಮೂಲಾ
ಇಳೆಯೊಳಾಯಿತು ಧರ್ಮಾನುಕೂಲ ೧

ಚಂಚಲೆಂಬುದೆ ಅಚಮನ ಮುಂಚೆ ಸಂಧ್ಯಾನಕಿದೆ ಸಾಧನ
ಸಂಚಿತ ಪ್ರಾಲಬ್ಧಕ್ರಿಯಮಾಣಾ
ವಂಚನಿಲ್ಲದಾಯಿತು ಅರ್ಘ್ಯದಾನಾ ೨

ಪರಮೇಷ್ಠಿ ಪರಬ್ರಹ್ಮಋಷಿಃ ಅರಿತು ಪ್ರಣಮ್ಯ ಸಾಧಿಸಿ
ತಿರುಗಿನೋಡಿಘನ ಸ್ಮರಿಸಿ ಕರಿಗಿ ಹೋಯಿತು ಪಾಪದ ರಾಶಿ ೩

ಆ ಹಪವೆ ಗಾಯತ್ರಿಮಂತ್ರ ಬೀಜಾಕ್ಷರವಿದು ಪವಿತ್ರ
ರಾಜಿಸುತಿಹ್ಯದು ಸರ್ವಾಂತರಾ ನಿಜಗುಹ್ಯ ಋಷಿಮುನಿಗೋತ್ರ ೪

ಸದೋದಿತ ಗುರುಭೋಧಪೂರ್ಣ ಇದಕಿಲ್ಲ ಉದಯಾಸ್ತಮಾನ
ಇದೇ ಮಹಿಪತಿ ಸಂಧ್ಯಾನ ಸದಾ ನಿತ್ಯಾನುಂಸಂಧಾನ ೫

## ೩೬೮

ಇದೇ ನೋಡಿರೋ ಸ್ವಯಂಪಾಕ ಸದಮಲಾನಂದಸುಖ ಧ್ರುವ

ಶುದ್ಧ ಮಾಡಿ ಹೃದಯಸ್ಥಳ ಇದು ಏಕಾಗ್ರ ನಿರ್ಮಳಾ
ಸಾಧ್ಯಗೊಂಡು ಮನಾನುಕೂಲ ಸಿದ್ಧಿ ಇದೇವೇ ಸುಶೀಲಾ ೧

ಭಕ್ತಿವೈರಾಗ್ಯೊಲಿಹೂಡಿ ನಿತ್ಯಜ್ಞಾನಾಗ್ನಿ ಒಡಗೂಡಿ
ತತ್ವ ಪಂಚಪಾತ್ರೆಯಮಾಡಿ ಸತ್ಯಸಂಕಲ್ಪ ಇದೇ ನೋಡಿ ೨

ಸಕಲ ಸಾಮುಗ್ರಿಯ ಸಂಚಿತಾ ಪಕ್ವಆಯಿತು ಆಯಿತು
ಮುಖ್ಯಮಹಿಪತಿಗಿದೆ ಸ್ವಹಿತಾ ಸುಖದೋರಿದ ಗುರುನಾಥಾ ೩

## ೩೬೯

ಇದೇ ನೋಡಿರೋ ಸುಜ್ಞಾನ
ಸದ್ಬೋಧದಲಿಹುದು ಮನಾ ಧ್ರುವ

ಜ್ಞಾನವೆಂಬುದೇ ಪುಣ್ಯನದಿ ಮನ ನಿರ್ಮಲಮಾಡುದು ನಾದಿ
ನಾನ್ಯಃ ಮನವೆಂಬುದು ಓದಿ
ಖೂನದೋರುದು ಸುಪಥದ ಹಾದಿ ೧

ಜ್ಞಾನ ಭಾಗೀರಥೀ ಸ್ನಾನಮಾಡಿ
ಮನಮೈಲ ಹೋಯಿತು ನೋಡಿ
ಘನಪುಣ್ಯೊದಗಿತು ಕೈಗೂಡಿ ಅನುದಿನ ಮನ ಮುಳಗ್ಯಾಡಿ ೨

ನಿತ್ಯಮಹಿಪತಿಗಿದೆ ಸುಸ್ನಾನ ನಿತ್ಯ ಸದ್ಗುರು ನಿಜಧ್ಯಾನ
ಉತ್ತಮೋತ್ತಮಿದೆ ಸಾಧನ ಹಿತದೋರುತಿದೆ ನಿಧ್ಯಾನ ೩

## ३೭೦

ಇದೇ ನೋಡಿ ಸ್ವತಶುದ್ಧ ಮಡಿ
ಸದಾ ಸರ್ವದಾ ಇದೇ ಮಾಡಿ ಧ್ರುವ

ಅರಹು ಎಂಬುದೆ ಮಡಿ ಉಡಿ
ಮರಹು ಮೈಲಗಿ ಮುಟ್ಟಬ್ಯಾಡಿ
ಗುರುಸ್ಮರಣೆ ನಿಷ್ಠೆಯೊಳುಗೂಡಿ
ಪರಬ್ರಹ್ಮ ಸ್ವರೂಪದ ನೋಡಿ ೧

ಕಾಮಕ್ರೋಧದ ಸ್ಪರ್ಶವ ಬ್ಯಾಡಿ
ನೇಮನಿತ್ಯ ಇದನೇ ಮಾಡಿ
ಶಮದಮೆಂಬುದು ಕೈಗೂಡಿ
ಪ್ರೇಮಭಾವ ಭಕ್ತಿಯ ಮಾಡಿ ೨

ಮಿಥ್ಯಾ ಭೂತಕ ಮಡಿಮಾಡಬ್ಯಾಡಿ
ಚಿತ್ತಚಿದ್ಘನ ಸಮರಸ ನೋಡಿ
ನಿತ್ಯ ಮಹಿಪತಿಗಿದೆ ಮಡಿ ನೋಡಿ
ಸತ್ಯ ಸನಾತನ ಪದಕೂಡಿ

## ೩೭೧

ಇದೇ ನೋಡಿ ಸುಭಕ್ತಿ ಸಾಧು ಜನರ ಸುಯುಕ್ತಿ
ಸಾಧಿಸಿ ನೋಡಿ ಸುವೃತ್ತಿ ಭೇದಿಸಿಕೂಡಿ ಸುಮುಕ್ತಿ ಧ್ರುವ

ಹಿಡಿದು ಸಾರುವ ಶ್ರುತಿ ನಿಜಗೂಡಿ
ಗೂಡಿನೊಳಗೆ ಬೆರೆದಾಡಿ
ಇಡಾಪಿಂಗಳ ನಾಡಿ ನಡುವಾವಿನ
ಜಾಡೆ ಹಿಡಿದು ಘನಗೂಡಿ ೧

ಏರಿನೋಡಲು ಆರು ಚಕ್ರತಾಂ
ದೋರುತದೆ ಸುಪಥ
ತಿರುಗಿನೋಡಲು ತನ್ನೊಳು ತಾ
ಸುರುವುತದೆ ಅಮೃತ ೨

ಹಿಡಿದು ಗುರುಪಾದಾರವಿಂದ
ಪಡೆದ ಮಹಿಪತಿ ಆನಂದ
ಗೂಢ ಗುರುತವಾಯಿತು ಬಲು ಚಂದ
ಕಡಿದ್ಹೋಯಿತು ಭವಬಂಧ ೩

## ೩೭೨

ಇದೇವೆ ಪೂಜೆಯ ನೋಡಿ ಹೃದಯದಲಿ ನಿಜ ಒಡಗೂಡಿ ಧ್ರುವ

ಮೂರ್ತಿ ಎಂಬುದೇ ಅಮೂರ್ತಿ
ನಾಮಸ್ವರೂಪದ ನಿಜಗುಹ್ಯವಾರ್ತಿ
ವ್ಯೋಮಾಕಾರದ ಮನೆಮೂರ್ತಿ ಸ್ವಾಮಿ ಸದ್ಗುರುವಿನ ಕೀರ್ತಿ ೧

ನಿತ್ಯ ನಿರ್ಗುಣ ನಿರ್ವಿಕಲ್ಪಾ ಸತ್ಯಸದ್ಗುರು ಸ್ವರೂಪಾ
ನಿತ್ಯ ನಿತ್ಯ ನಿತ್ಯರ್ಥ ಸುದೀಪಾ ತತ್ವಜ್ಞಾನ ಮನಮಂಟಪಾ ೨

ಸ್ವಾನುಭವ ಸ್ವಾದೋದಕ ಜ್ಞಾನ ಭಾಗೀರಥೀ ಅಭಿಷೇಕ
ಮೌನಮೌನ್ಯವಸ್ತ್ರಾ ಮೋಲಿಕಾ ಧಾನ್ಯವೆಂಬುದೇ ಸೇವೆ ಅನೇಕಾ ೩

ಗಂಧಾಕ್ಷತಿ ಪರಿಮಳವುಳ್ಳ ಪುಷ್ಪ ಬುದ್ಧಿಮನವಾಯಿತು ಸ್ವರೂಪಾ
ಸದ್ವಾಸನ್ಯಾಯಿತು ಧೂಪದೀಪ ಸದ್ಭಾವನೆ ನೈವೇದ್ಯಮೋಪಾ ೪

ಫಲತಾಂಬೋಲವೆ ಸದ್ಭಕ್ತಿ ಮ್ಯಾಲಭಿಭಾವನೆ ಮಂಗಳಾರ್ತಿ
ಬಾಲಕ ಮಹಿಪತಿ ನಿಜಪೂಜಿಸ್ಥಿತಿ
ಕುಲಕೋಟಿ ಉದ್ಧರಿಸುವ ಗತಿ ೫

## ೩೭೩

ಇದೇ ಸಂಧಿಸಿ ಧರ್ಮ ಭೇದಸಿ ಗುರುವರ್ಮ
ಶೋಧಿಸಿ ನೋಡಲಿಕ್ಕೆ ಭೇದಿಸಿಹೋಗುದು ಭವಕರ್ಮ ಧ್ರುವ

ಕಾಣಾದ ಕಾಣಬ್ಯಾಡಿ ಕಾಣಿಸುವದು ನೋಡಿ
ಕಾಣಿಸಿ ಕಾಣಗೊಡದಿಪ್ಪದ ಖೂನ ನಿಜಮಾಡಿ ೧

ದೋರದ ನೋಡಬ್ಯಾಡಿ ದೋರಿಸುವದು ನೋಡಿ
ದೋರಿಸಿದೋರಗುಡದಿಹುದ ಖೂನ ನಿಜಮಾಡಿ ೨

ಕೇಳದ ಕೇಳಬ್ಯಾಡಿ ಕೇಳಿಸುವದ ನೋಡಿ
ಕೇಳಿಸಿ ಕೇಳಿಗೊಡದಿಹುದ ಖೂನ ನಿಜಮಾಡಿ ೩

ಆಡದ ನೋಡಬ್ಯಾಡಿ ಅಡಿಸುವದ ನೋಡಿ
ಅಡಿಸಿ ಆಟ ನೋಡಗೂಡದ ಖೂನ ನಿಜಮಾಡಿ ೪

ನುಡದ ನೋಡಬ್ಯಾಡಿ ನುಡಿಸುವದ ನೋಡಿ
ನುಡಿಸಿ ನುಡಿ ತಿಳಿಯಗುಡದ ಖೂನ ನಿಜಮಾಡಿ ೫

ಮಾಡದ ನೋಡಬ್ಯಾಡ ಮಾಡಿಸೂವದ ನೋಡಿ
ಮಾಡಿಸಿ ಮಾಡದೋರಗುಡದ ಖೂನ ನಿಜಮಾಡಿ ೬

ತಿಳುಹದ ನೋಡಬ್ಯಾಡಿ ತಿಳುಹಿಕುಡದ ನೋಡಿ
ತಿಳುವಿಸುವದ ತಿಳುವದೆ ಮಹಿಪತಿವಸ್ತ ನೋಡಿ ೭

## ೩೭೪

ಇದೇ ಸಾಧಿಸಿನೋಡಿ ಮನ ಉನ್ಮನಮಾಡಿ ಘನಸುಖ
ಭೇಧಿಸಿದರ ಭಾಸುತದೆ ತನ್ನೊಳು ತಾನೆ ಕೌತುಕ ಧ್ರುವ

ಸರ್ವಮಿದಂ ಖಲು ಬ್ರಹ್ಮವೆಂಬುವ ಮಾತು ಇದು
ನೋಡಿ ನೋಡಿ ಖೂನ
ಅರುಹು ಇಲ್ಲದೆ ಜನದೊಳು ಬರುದೆ ಹೇಳ್ಯಾಡುದೇನ
ನಿರ್ವಿಕಲ್ಪನ ನಿಜನೆಲೆನಿಭವರಿತು ನೋಡಿ ಸ್ಥಾನ
ಸರ್ವಸಾಕ್ಷಿ ಸರ್ವಾತೀತವೆಂಬ ವಸ್ತು ನೋಡಿ ಪೂರ್ಣ ೧

ಕಣ್ಣಿನ ಕೊನೆ ಮುಟ್ಟಿ ಕರಗಿ ಮನವು ನೋಡಿ ಪೂರ್ಣ ಬೊಧ
ಸಣ್ಣ ದೊಡ್ಡವರೊಳಗಿದೆ ಒಂದು ಸಾರುತಿದೆ ವೇದ
ಧನ್ಯ ಧನ್ಯಗೈಸುವ ನಿಜ ಪುಣ್ಯ ಗುರುಪಾದ
ಚನ್ನಾಗ್ಯನುಭವದಿಂದ ನೋಡಲಿಕ್ಯಾಗದು ಸ್ವಾದ ೨

ಸುರಿಮಳಿಗರೆವುತಲ್ಯದೆ ಸ್ವಸುಖದಾನಂದೊ ಬ್ರಹ್ಮ
ತೆರೆತಿಳಿಯಲಿಕ್ಕೆ ಗುರು ಶರಣ ಹೋಗಬೇಕು ಇದೇ ವರ್ಮ
ಹರುಷಗೈಸಿದ ನೋಡಿ ಪತಿತಪಾವನ ಸದ್ಗುರು ನಮ್ಮ
ತರಳ ಮಹಿಪತಿಗಿದೆ ನಿತ್ಯಭಿನವದ ನೋಡಿ ಸಂಭ್ರಮ ೩

## ೩೭೫

ಇಲ್ಲೆವೆ ನಿಧಾನವು ಶ್ರೀಗುರುವೆ ನಿಮ್ಮಲ್ಲೆವೆ ನಿಧಾನವು
ಎಲ್ಲರಿಗಿದು ತಾ ದುರ್ಲಭವಾಗಿಹ್ಯ ಸುಲಭದಲಿ
ಒಲಿದಿಹ್ಯ ಸದ್ಗುರು ನಮಗಿಲ್ಲೆ ನಿಧಾನವು ಧ್ರುವ

ಭೇದಾಭೇದವನಳಿದು ಸದ್ಗುರುವಿನ ಪಾದ ಪದ್ಮವ ತಿಳಿದು
ವೇದಕಗೋಚರವು ಸದ್ಗತಿ ಸುಖ
ಸಾಧಿಸುವವ ಧನ್ಯನು ಶೋಧಿಸಿ ಅತ್ಮದಿ ಬೋಧೆಯಲಿ ನಿಜ
ಅದಿತತ್ವದ ಗತಿ ಭೇದಿಸಿ ತಿಳಿದವಗಿಲ್ಲಿವೆ ೧

ಖುಲ್ಲ ಮನುಜರಿಗಿದು ತಿಳಿಯದೆ ಇಲ್ಲದಂತಾಗಿಹುದು
ಎಲ್ಲಾ ದೈವದ ಮೂಲವು ಬಲ್ಲವಗಿದು ಸೊಲ್ಲಿನೊಳಗಿಹುದು
ಕಲ್ಲಿನೊಳಿಹ ದೈವಿಲ್ಲವೆ ಇಹ್ಯ
ಪ್ರಾಣದೊಲ್ಲಭ ಗುರುನೆಂದಿಲ್ಲೆವೆ ತಿಳಿದುವಗಿಲ್ಲೆವೆ ೨

ಸುತ್ತೇಳು ಸಾಗರದ ಪೃಥ್ವಿಲಿಹ್ಯ ನಿತ್ಯವುಳ್ಳ ದೈವೀತನು
ಸುತ್ತ ಸನಕಾದಿಗಳು ಮತ್ತೆ ದೇವರು
ತೆತ್ತೀಸ ಕೋಟಿಗಳು ಹತ್ತಿಲೆ ಹೊಳೆಯುತ್ತ ಚಿತ್ತದ ತುದಿಯಲಿ
ಸತ್ಯಕೈಲಾಸವೆ ಇತ್ತ ವೈಕುಂಠವು ಇಲ್ಲವೆ ೩

ಕಾಶಿ ರಾಮೇಶ್ವರವು ಸಕಲ ಕ್ಷೇತ್ರವಾಸವಾಗಿಲ್ಲಿಹವು
ದೋಷನಾಶನ ಕೃಷ್ಣೆಯು ಮಿಗಿಲಾದ
ಏಸು ತೀರ್ಥಗಳಿಹ್ಯವು ವಾಸವಾಗಿಹವು ಸೂಸುತ ನದಿಗಳು
ಈಶನ ಚರಣದಲಿ ಭಾಸುದು ಕಂಡವಗಿಲ್ಲೆವೆ ೪

ಚೆಂದುಳ್ಳ ದ್ವಾರಕೆಯು ಗೋಕುಲ ವೃಂದಾವನ ಕುರುಕ್ಷೇತ್ರವು
ಒಂದೊಂದೇ ಕ್ಷೇತ್ರದಲಿ ವಾಸವಾಗಿ
ನಿಂದು ಮಾಡಿದ ಪುಣ್ಯವು ಹಿಂದಿನ ಕರ್ಮವು
ಹೊಂದದೆ ಗಳಿಸುವ ಮಂದಾಕಿನಿ ನದಿಯಿಂದ ಫಲಿಲ್ಲಿವೆ ೫

ಹಿಂಡ ದೈವದೊಡೆಯನು ಅನಂತಕೋಟಿ
ಬ್ರಹ್ಮಾಂಡ ನಾಯಕನು
ಕಂಡು ಅದ್ವೈತ ಸುಖವು ಉಂಡವಗಿದು
ಪಿಂಡ ಬ್ರಹ್ಮಾಂಡೈಕ್ಯವು ಮಂಡಲದೊಳು
ಬ್ರಹ್ಮಾಂಡದಲಿಹ ಪ್ರಚಂಡ ಶ್ರೀಗುರು
ಪಿಂಡಾಂಡದಿ ಕಂಡವಗಿಲ್ಲವೆ ೬

ಸಂದೇಹ ವೃತ್ತಿ ಹರಿದು ಸದಮಲಾನಂದ ಮುಕ್ತಿಯಲಿ ಬೆರೆದು
ಒಂದು ಪಥವನರಿದು ಜಗದೊಳು
ದ್ವಂದ್ವಗಳನೆ ಮರೆದು ಎಂದಿಗಗಲದಂತೆ
ತಂದೆ ಶ್ರೀ ಗುರುವಿನ ಹೊಂದಿ
ಶ್ರೀಪಾದವನಿಂದ ಮಹಿಪತಿಗೆ ಇಲ್ಲವೆ ೭

## ೩೭೬

ಇವ ನಮ್ಮ ದಾತ ಅವಗುಣ ಧೂತ
ಅವಗುಣ ಧೂತ ದೇವಾಧಿದೇವ ಶ್ರೀದೇವ ಅವಧೂತ ಧ್ರುವ

ಜೀವದ ಜೀವ ದೇವರ ದೇವ
ಭಾವಿಕರ ಕಾವ ಶ್ರೀ ವಾಸುದೇವ ೧

ಪ್ರಾಣಕ ಪ್ರಿಯ ಮುನಿಜನಾಶ್ರಯ
ಜ್ಞಾನಿಗಳಿಗೆ ಸಾಹ್ಯ ಅನುಕೂಲ ನಮ್ಮಯ್ಯ ೨

ಅನಾಥ ಬಂಧು ಘನಕೃಪಾಸಿಂಧು
ಅನುದಿನ ದೊರೆವ ದೀನನಾಥನೆಂದೆಂದು ೩

ಮನದ ಮಾಣಿಕ ಅಣುರೇಣುಕ ವ್ಯಾಪಕ
ಅನಂತಕೋಟಿ ಬ್ರಹ್ಮಾಂಡ ನಾಯಕ ೪

ಪರಮ ಉದಾರ ಕರುಣಾಸಾಗರ
ತರಳ ಮಹಿಪತಿಸ್ವಾಮಿ ಇಹಪರ ಸಹಕಾರ ೫

## ೩೭೭

ಇಂದು ಗುರುಪೂಜಿ ಮಾಡುವ
ನಿಂದು ಮನದೊಳು ಹರುಷಪಡುವ ಧ್ರುವ

ತಂದೆ ಸದ್ಗುರುಸೇವೆ ಮಾಡುವ
ಬಂದ ಜನ್ಮದ ಹಾದಿ ಬಿಡುವ
ಒಂದೆ ಪಥ ಬ್ಯಾಗೆ ಹಿಡುವ
ಹೊಂದಿ ಸದ್ಗತಿ ಮುಕ್ತಿ ಕೊಡುವ ೧

ಬಂದು ಸಾರ್ಥಕ ಮಾಡುವ
ಇಂದಿರೇಶನ ಪಾದ ನೋಡುವ
ತಂದು ರತಿಪ್ರೇಮ ನೀಡುವ
ಒಂದು ನಾಮ ನಿಶ್ಚಯವಿಡುವ ೨

ಒಂದು ಮನದಿ ಪೂಜಿಮಾಡುವ
ಎಂದು ಬಿಡದೆ ನಾಮವ ಕೊಂಡಾಡುವ
ಇಂದು ನಲಿನಲಿದಾಡುವ
ಕಂದ ಮಹಿಪತಿಸ್ವಾಮಿ ನೋಡುವ ೩

## ೩೭೮

ಇಂದು ಶ್ರೀ ಗುರುಪಾದಪದ್ಮ ನೋಡುವ
ಎಂದೆಂದು ಬಿಡದೆ ಭಾವಭಕ್ತಿ ಮಾಡುವ ಧ್ರುವ

ಮನವೆಂಬ ಮನಮಂಟಪವನಾಡುವ
ನೆನವು ನವರತ್ನದ ಸಿಂಹಾಸನಿಡುವ
ಜ್ಞಾನಧ್ಯಾನದಡಬಲದಿ ಪಿಡಿವ
ಅನುವಾಗಿ ಅನಿಮಿಷದಲಿ ನೋಡುವ ೧

ತನುವೆಂಬ ತಾರತಮ್ಯಭಾವ ಮಾಡುವ
ಅನುಭವದಿಂದನುಪಮನ ನೋಡುವ
ಆನಂದವೆಂಬ ಅಭಿಷೇಕವ ಮಾಡುವ
ಮನೋ ಅಭೀಷ್ಟೆಯ ಸುವಸ್ತ್ರನೀಡುವ ೨

ಬುದ್ಧಿ ಭಾವನೆಯ ಗಂಧಾಕ್ಷತಿಡುವ
ಶುದ್ಧ ಸುವಾಸನೆ ಪರಿಮಳ ಮಾಡುವ
ಶಬ್ದ ಸುವಾಕ್ಯವೇ ಪುಷ್ಪವ ನೀಡುವ
ಸಿದ್ಧಾಂತವೆಂಬುದೇ ಸುಸೇವೆ ಮಾಡುವ ೩

ಪ್ರಾಣ ಪಂಚವೇ ಪಾದಪೂಜೆಯ ಮಾಡುವ
ಪುಣ್ಯಪೂರ್ವಾರ್ಜಿತ ಫಲಗಳಿಡುವ
ಅನೇಕವಾದ ಪರಿಪೂಜೆ ಮಾಡುವ
ಧನ್ಯ ಧನ್ಯವಾಗುವ ಮುಕ್ತಿಬೇಡುವ ೪

ನಿರ್ವಿಕಲ್ಪ ನಿಜಮೂರುತಿ ನೋಡುವ
ಪೂರ್ವಕರ್ಮವೆಂಬ ಧೂಪಾರ್ತಿ ಮಾಡುವ
ಅರುವೆಂಬ ದೀಪದಿ ಏಕಾರ್ತಿ ಮಾಡುವ
ಸರ್ವಕಾಲದಲಿ ಸಂತೋಷಬಡುವ ೫

ಜೀವ ಭಾವನೆಂಬ ನೈವೇದ್ಯವಿಡುವ
ವಿವೇಕುದಕ ಸಮರ್ಪಣೆ ಮಾಡುವ
ತ್ರಿವಿಧಗುಣವೆಂಬ ತಾಂಬೋಲನಿಡುವ
ಅವಾವಪರಿಯು ಪ್ರಾರ್ಥನೆ ಮಾಡುವ ೬

ಪಂಚತತ್ವದ ಪಂಚಾರತಿ ಮಾಡುವ
ಚಂಚಲವಿಲ್ಲದೆ ಚಿದ್ಘನ ನೋಡುವ
ಪಂಚಭೂತವೆಂಬಾರತಿ ಮಾಡುವ
ಸಂಚಿತಕ್ರಿಯ ಮಂತ್ರಪುಷ್ಪನೀಡುವ ೭

ದಿವ್ಯ ಯೋಗ ಭೋಗ ಚೌರ ಢಾಳಿಸುವ
ಅವಲೋಕನೆಯ ಬೀಸಣಿಕೆ ಬೀಸುವ
ಕಾವ ಕರುಣನ ಪಾದ ನಮಿಸುವ
ಭವಬಂಧನದ ಮೂಲ ಛೇದಿಸುವ ೮

ನಮ್ರತವೆಂಬ ಸಮಸ್ಕಾರ ಮಾಡುವ
ಸಂಭ್ರಮದಿಂದ ಸ್ವಸ್ವರೂಪ ನೋಡುವ
ಪ್ರೇಮಪ್ರೀತೆಂಬ ಪ್ರದಕ್ಷಿಣಿ ಮಾಡುವ
ಜನ್ಮ ಮರಣದ ಹಾದಿಯು ಬಿಡುವ ೯

ನಿರ್ಗುಣದಿಂದ ಸ್ವರೂಪ ನೋಡುವ
ನಿಗಮಗೋಚರನೆಂದು ಸ್ತುತಿ ಪಾಡುವ
ಅಗಣಿತಗುಣ ಸುಕೀರ್ತಿ ಸೂರ್‍ಯಾಡುವ
ಜಗದೊಳಾನಂದದಿಂದ ನಲಿದಾಡುವ ೧೦

ಅನಾಹತವೆಂಬ ಧ್ವನಿವಾದ್ಯ ಮಾಡುವ
ಅನಂದೋ ಬ್ರಹ್ಮದೊಳು ಮುಳಗ್ಯಾಡುವ
ಭಾನುಕೋಟಿತೇಜ ಪ್ರಕಾಶ ನೋಡುವ
ದೀನಮಹಿಪತಿ ಸ್ವಾಮ್ಯೆಂದು ಕೊಂಡಾಡುವ ೧೧

## ೩೭೯

ಈತ ಶ್ರೀಗುರು ಪರಬ್ರಹ್ಮನೆನ್ನಿ
ಅತೀತವಾದ ಗುಣತ್ರಯ ಪರಮಾತ್ಮನೆನ್ನಿ ಧ್ರುವ

ನಿರ್ಗುಣಾಂದನೆನ್ನಿ ನಿಗಮಗೋಚರನೆನ್ನಿ
ಅಗಣಿತಗುಣ ಪರಿಪೂರ್ಣನೆನ್ನಿ ೧

ಯೋಗಾನಂದಾತ್ಮನೆನ್ನಿ ಯೋಗಿವಂದಿತನೆನ್ನಿ
ಯೋಗಿಹೃದಯವಾಸ ಯೋಗನಿಧಾನನೆನ್ನಿ ೨

ಸಾಧುಸಹಕಾರನೆನ್ನಿ ಸದಾನಂದಾತ್ಮನೆನ್ನಿ
ಸದ್ಬ್ರಹ್ಮಾನಂದ ಸದೋದಿತನೆನ್ನಿ ೩

ಜ್ಞಾನಸಾಗರನೆನ್ನಿ ಜ್ಞಾನಾನಂದಾತ್ಮನೆನ್ನಿ
ಜ್ಞಾನಿಗಳೊಂದಿಹ ಸುಜ್ಞಾನಸ್ವರೂಪನೆನ್ನಿ ೪

ಪರಮಪುರಷನೆನ್ನಿ ಪರಮಪ್ರಕಾಶನೆನ್ನಿ
ಪರಮಾನಂದಸ್ವರೂಪ ಪರಾತ್ಪರ ಪೂರ್ಣನೆನ್ನಿ ೫

ಇಹಪರನೀತನೆನ್ನಿ ಗುಹ್ಯಗುಪಿತನೆನ್ನಿ
ಬಾಹ್ಯಾಂತ್ರಪರಿಪೂರ್ಣ ತ್ರೈಲೋಕ್ಯನಾಥನೆನ್ನಿ ೬

ಕಾವಕರುಣನೆನ್ನಿ ಭವಭಂಜನನೆನ್ನಿ
ಜೀವಸಂಜೀವ ಮಹಿಪತಿ ಗುರುಮೂರ್ತಿಯೆನ್ನಿ ೭

## ೩೮೦

ಈತ ಶ್ರೀ ಗುರುನಾಥಾ ದಾತ ತ್ರೈಲೋಕ್ಯಕೀತ ಧ್ರುವ

ದೂರ ಸಗುಣ ಸಹಕಾರ ಧೀರ ಪರಮಉದಾರ
ದುರಿತ ಸಂಹಾರ ಪರಾತ್ಪರ ಪರಾಕಾರ ೧

ಈಶ ಭವಭಯನಾಶ ಶೇಷಶಯನ ಸರ್ವೇಶ
ದೋಷಹರ ಕರುಣೇಶ ಕ್ಲೇಶನಾಶ ದೇವೇಶ ೨

ಮಾತಾ ವಿಶ್ವನಿರ್ಮಿತ ಪಿತಾಮಹನ ಪಿತ
ಈತ ಮಹಿಪತಿ ಹಿತ ನಾಥಾ ಭಕ್ತಮುನೀತ ೩

## ೩೮೧

ಉಂಬುವ ಬನ್ನಿರೋ ಅನಂದದೂಟವ
ಹಂಬಲಿಸಿ ಸವಿದು ತುತ್ತು ಕೊಂಬ ಬನ್ನಿರೋ ಧ್ರುವ

ಬಡಿಸಿಹಿದು ನೋಡಿ ಅನೇಕ ಪರಿಯಲಿ
ಎಡಬಲಕೆ ನೋಡಲಾಗದಾನಂದ ಘನಲೀಲೆ ೧

ಇಡಿದು ತುಂಬಿದೇ ನಿಧಾನದೂಟವು
ನೋಡಲಿಕ್ಕೆ ತೃಪ್ತಿಗೈಸುತಿಹುದು ನೋಟವು ೨

ಬೇಡಿಸಿಕೊಳ್ಳದೆ ಬಡಸುತಿಹ್ಯನು
ಮೂಢ ಮಹಿಪತಿ ಒಡೆಯ ಭಾನುಕೋಟಿತೇಜನು ೩

## ೩೮೨

ಉಂಬುವ ಬನ್ನಿರೋ ನೀಟ ಅನುಭವದೂಟ ಧ್ರುವ

ಎಡಿಯು ಬಡಿಸಿಪೂರ್ಣ ಗೂಡಿನೊಳಿಟ್ಟಿದೆ ಖೂನ
ನೋಡಿ ನಿಮ್ಮೊಳು ನಿಧಾನ ಮಾಡಿ ಭೋಜನ ೧

ತುತ್ತುಕೊಂಬುದು ಬ್ಯಾಗೆ ಸತ್ಸಂಗದಲಿ ನೀವೀಗ
ಅತಿಶಯಾನಂದ ಭೋಗ ಉತ್ತಮ ಯೋಗ ೨

ಕಲ್ಪನೆಂಬುದು ನೊಣ ಬೀಳಗೊಡದೆ ಜತನ
ಬಳೆದುಕೊಂಡುಂಬುವ ಜಾಣ ಕಳೆದನುಮಾನ ೩

ಸವಿಸವಿಮಾಡಿಕೊಂಡು ಸೇವಿಸುವದು ಮನಗಂಡು
ಪಾವನಾಗಬೇಕು ಉಂಡು ಸವಿಸೂರೆಗೊಂಡು ೪

ಉಂಡು ಮಹಿಪತಿ ನೋಡಿ ಕೊಂಡಾದಿಡಾನಂದಗೂಡಿ
ಮಂಡಲದೊಳಿದೇ ಮಾಡಿ ಬಿಡದೆ ಸೂರ್‍ಯಾಡಿ ೫

## ೩೮೩

ಎನಗಾಧಿಯೋ ಗುರು ಅಧಿಯೋ ಧ್ರುವ

ಒಬ್ಬಗೆ ಮತಿ ಆಧಿ ಒಬ್ಬಗೆ ಶ್ರುತಿ ಆದಿ
ಒಬ್ಬಗೆ ಶ್ರುತಿಪುರಾಣಾದಿ
ಒಬ್ಬಗೆ ಶ್ರೋತ್ರಾಧಿ ಒಬ್ಬಗೆ ಸ್ಮಾರ್ತಾಧಿ ಒಬ್ಬಗೆ ಜ್ಯೋತಿಷ್ಯದಾಧಿ
ಒಬ್ಬಗೆ ಮತದಾಧಿ ಒಬ್ಬಗೆ ವ್ರತ್ಯದಾಧಿ ಒಬ್ಬಗೆ
ಮಿತವಾಕ್ಯದಾಧಿ
ಒಬ್ಬೊಬ್ಬಗೊಂದೊಂದು ಉಂಟಾಗಿಹ್ಯದಾಧಿ ಎನಗೆ ನಿಮ್ಮ
ಶ್ರೀಪಾದದಾಧಿ ೧

ಒಬ್ಬಗೆ ವೃತ್ತಾಧಿ ಒಬ್ಬಗೆ ವಿತ್ತಾಧಿ ಒಬ್ಬಗೆ ಸ್ತುತಿಸುವದಾಧಿ
ಒಬ್ಬಗೆ ತೀರ್ಥಾಧಿ ಒಬ್ಬಗೆ ಕ್ಷೇತ್ರಾಧಿ ಒಬ್ಬಗೆ
ಯಂತ್ರ ಮಂತ್ರದಾಧಿ
ಒಬ್ಬಗೆ ಶೈವಾಧಿ ಒಬ್ಬಗೆ ಶಕ್ತ್ಯಾಧಿ ಒಬ್ಬಗಾಗಮಯುಕ್ತಿ ಆಧಿ
ಒಬ್ಬೊಬ್ಬಗೊಂದೊಂದು ಉಂಟಾಗಿಹ್ಯ ದಾಧಿಎನಗೆ ನಿಮ್ಮ
ಶ್ರೀಪಾದದಾಧಿ ೨

ಒಬ್ಬಗೆ ಹಟದಾಧಿ ಒಬ್ಬಗೆ ದಿಟದಾಧಿ ಒಬ್ಬಗೆ ತಟಕೂಪದಾಧಿ
ಒಬ್ಬಗೆ ಪಟದಾಧಿ ಬಗೆ ಪಠಣ್ಯಾದಿ ಒಬ್ಬಗೆ ಮಠಮಾನದ್ಯಾಧಿ
ಒಬ್ಬಗೆ ಕುಟಲಾಧಿ ಒಬ್ಬಗೆ ಜಟದಾಧಿ ಒಬ್ಬಗೆ ಘಟಿಸುವ ಆಧಿ
ಒಬ್ಬಬ್ಬಗೊಂದೊಂದು ಉಂಟಾಗಿ ಹ್ಯದಾಧಿ ಎನಗೆ ನಿಮ್ಮ
ಶ್ರೀಪಾದದಾಧಿ ೩

ಒಬ್ಬಗೆ ರಸದಾಧಿ ಒಬ್ಬಗೆ ಕಸದಾಧಿ ಒಬ್ಬಗೌಷಧಮಣಿ ಆಧಿ
ಒಬ್ಬಗೆ ಕೃಷದಾಧಿ ಒಬ್ಬಗೆ ದೇಶಿ ಆಧಿ ಒಬ್ಬಗೆ ಹುಸಿಹುಟ್ಟಣ್ಯಾಧಿ
ಒಬ್ಬಗೆ ವೃಷದಾಧಿ ಒಬ್ಬಗೆ ದ್ವೇಷಾಧಿ ಒಬ್ಬಗೆ ಪ್ರಶಂಸದಾಧಿ
ಒಬ್ಬೊಬ್ಬರಿದೊಂದೊಂದು ಉಂಟಾಗಿ ಹ್ಯದಾಧಿ ಎನಗೆ
ನಿಮ್ಮ ಶ್ರೀಪಾದದಾಧಿ ೪

ಮನಕೆ ಮರೆಯಾಗಿ ಜನಕ ಠವಿಸುವ ಅನೇಕಪರಿ ಲೋಕದಾಧಿ
ಖೂನಕೆ ಬಾರದೆ ಜ್ಞಾನಕೆ ತಾನೊಂದು ಅನುಭವಕಿಲ್ಲದಾಧಿ
ಅನಾಥಬಂಧು ಎನಿಸಿಕೊಂಬ ಬಿರುದಿದು ಎನಗೆ
ಉಂಟಾಗಿಹ್ಯದಾಧಿ
ಭಾನುಕೋಟಿತೇಜ ನಿಮ್ಮ ಶ್ರೀಪಾದವು ದೀನ
ಮಹಿಪತಿಗೆ ಅಧಿ ೫

## ೩೮೪

ಎಲ್ಲಾರಿಗೆಲ್ಲಿಹದು ಫುಲ್ಲನಾಭನ ಸೇವೆ
ಸುಲಭವಲ್ಲವಿದು ದುರ್ಲಭ ಸದ್ಗುರು ಮಾರ್ಗ ಧ್ರುವ

ಕೋಟ್ಯಾನುಕೋಟಿಗೊಬ್ಬ ಮುಟ್ಟಿ ಕಂಡಿದರಲಿ
ನೆಟ್ಟಿಸಿ ತನ್ನೊಳು ತಾ ದೃಷ್ಟಿಸಿ ಗುರುಪಾದ ೧

ಮಾತಿನಂತಲ್ಲವಿದು ಜ್ಯೋತಿರ್ಮಯದ ಸುಖ
ನೇತಿನೇತಿವೆಂಬುದು ಶ್ರುತಿ ಸಾರುತದ ವಾಕ್ಯ ೨

ಹರಡಿಸಿರಾಗದು ಮೂರುಲೋಕದೊಳಗ
ಕರುಣಿಸಿದರಾಹುದು ಗುರು ಕೃಪೆಯಿಂದ ೩

ಮರ್ಮ ತಿಳಿಯದೆಂದೆಂದು ಕರ್ಮತಮಂಧರಿಗೆ
ಬ್ರಹ್ಮ ಸುಖದೋರುವ ಸ್ವಾಮಿ ಸದ್ಗುರು ಧರ್ಮ ೪

ಸೇವೆ ಸೂತ್ರನರಿಯದ ಭಾವಿ ಮಹಿಪತಿಗೆ
ಭಾವಭಕ್ತಿಯ ಕೊಟ್ಟು ಪಾವನಗೈಸಿದ ೫

## ೩೮೫

ಏನುಂಟೇನಿಲ್ಲ ಗುರುಕೃಪೆಯಿಂದ
ತನುಮನಿಟ್ಟದೇ ಪಡಕೊಂಬುದು ಚಂದ ಧ್ರುವ

ಸುಖ ಸುರುತದೆ ನೋಡಿ ಬಲುಬ್ರಹ್ಮಾನಂದ
ಪ್ರಕಟಸಲಿಕ್ಕೆ ಬಾರದು ಮುಖದಿಂದ
ಸಕಲವೆಲ್ಲಕೆ ಮೇಲು ತಿಳಿಯಬೇಕಿದೊಂದೆ
ಶುಕಾದಿ ಮುನಿಗಳದಾರಿದರಿಂದೆ ೧

ಸಿದ್ಧ ಬುದ್ಧರಿಗೆ ಸಾದ್ಯವದೆ ಸಿದ್ಧ ನೋಡಿ
ಬುದ್ಧಿವಂತರಿಗೆ ಒಲಿದುಬಾಹುದು ಕೈಗೂಡಿ
ಸನ್ಮಾರ್ಗ ಸುಪಥವಿದೆ ಸದ್ಗುರು ಸೇವೆಮಾಡಿ
ಸದ್ಭಾವದಿಂದಲಿ ಸ್ವಸುಖವೆ ಸೂರ್‍ಯಾಡಿ ೨

ಭಾಸ್ಕರ ಗುರುದಯದವಗಿನ್ನೇನು
ಭಾಸುತೀಹ್ಯದಾವಗಿನ್ನು ನಿಜಕಾಮಧೇನು
ವಿಶ್ವದೊಳಗವನೊಬ್ಬ ಸಿದ್ಧತಾನು
ದಾಸಮಹಿಪತಿಗಿದೇ ಅಭಿನವಧೇನು ೩

## ೩೮೬

ಏನೆಂದರಿಬೇಕೀ ಆಟಾ ಘನಗುರು ಮಾಡಿದ ಮಾಟ
ಅನುಮಾನಳಿಸಿದ ನೋಟ ಅನುಭವಕಾಯಿತು ನೀಟ ಧ್ರುವ

ರಂಜಕ ಬಲುಕೊಂಡಿತು ನೋಡಿ ಅಂಜಿಕಿ ಭವಭಯ ಈಡ್ಯಾಡಿ
ಪ್ರಾಂಜಲ ಸದ್ಗುರು ದಯಮಾಡಿ ಅಂಜನ ಹಚ್ಚಿದ ದುವುಡಿ ೧

ಕಾಣದ ಕಂಡೆವು ಕಣ್ಣಿಲಿ ಖೂನಕ ಬಾರದು ಘನಲೀಲೆ
ಜಾಣರು ಬಲ್ಲರು ಮನದಲಿ ನೆನದರು ತಾಂ ವರಿಕಿಲೆ ೨

ಆಶ್ಚರ್ಯವು ತಾನಾಗ್ಯದೆ ನಿಶ್ಚಯದೋರುತಲ್ಯದೆ
ಪಶ್ಚಿಮಕೆ ಭಾಸುತದೆ ಸ್ವಚ್ಛವು ನೋಡಿದರದೆ ೩

ರಚ್ಚಿಗೆ ತಾಂ ಬಾಹುದೆಲ್ಲ ಮುಚ್ಚಿಟ್ಟಡೆ ಬಾಳು ಸವಿಬೆಲ್ಲ
ಅಚ್ಚಳಿಯದ ಭಕ್ತನೆ ಬಲ್ಲ ನೆಚ್ಚಿದ ಮಹಿಪತಿ ಸೊಲ್ಲ ೪

## ೩೮೭

ಏನೆಂದು ಬಣ್ಣಿಸುವೆನು ಗುರುವಿನ ನಾನು ।
ತಾನಂದವರಿಗಿನ್ನು ಸ್ವಾನಂದ ಸುಖವ ನೀಡುವಾ ಪ

ತಾಯಿಯಂಬೆನೆ ಮೋಹದೀ । ಬಾಲಕ ಧೃವನಾ ।
ತಾಯಿಗಾಯ್ದಳೆ, ಸ್ನೇಹದಿ ಜನಕನೆಂಬೆನೆ ।
ನ್ಯಾಯದಿ ಪ್ರಲ್ಹಾದನ ಜನಕ ಕಾಯ್ದನೆ ನೋಡಮ್ಮಾ ೧

ಬಂಧುಯಂಬೆನೆ ಜಗದೊಳು ವಿಭೀಷಣನ್ನಾ ।
ಬಂದು ಕಾಯ್ದನೆ, ಇಳೆಯೊಳು ಆಪ್ತನೆಂಬೆನೆ ।
ಸದು ವಿಗ್ರಹದಿ ಗಜೇಂದ್ರರ ನಾಪ್ತರು ಕಾಯ್ದರೇ ೨

ಇಂತು ಸಂಬಂಧ ಸ್ನೇಹದಾ । ಸಾಸಿರ ಮಡಿಯಾ ।
ಸಂತತ ಕೃಪೆಯಾ ಬೀರಿದಾ । ಮಹಿಪತಿ ಕಾಯಾ ।
ಪಂಥವರಿಯದಾ ಪರಮ ಭ್ರಾಂತನಾನು । ದ್ಧರಿಸಿದ ನೆನ್ನಾ ೩

## ೩೮೮

ಕಡೆವ ಬನ್ನಿ ಸಡಗರದಿಂದ ಘುಡಘುಡಿಸಿ
ದೃಢವೆಂಬುದು ಕಡುಕಂಬನೆ ಮಾಡಿ ನಡನಡಿಸಿ
ನುಡಿ ನಿಜ ವಡನೆ ಪಡಗವ ತಂದು ಜಡದಿಡಸಿ ಜಡದಿಡಸಿ
ಹುಡುಕಿ ತೆಗೆದಡಕುವ ನವನೀತ ಗಡಬಡಿಸಿ ಗಡಬಡಿಸಿ ೧

ಮೀಸಲಮನ ಕೆನೆ ಮೊಸರನೆ ಮಾಡಿ ಶೋಧಿಸಿ ಶೋಧಿಸಿ
ವಾಸನೆ ಮೊಸರ ಕರುಣಿಕುಸಕಿರಿದು ಮರ್ದಿನಿ ಮರ್ದಿನಿ
ಮೋಸಹೋಗದೆ ದುರಾಶದ ಕಿಲ್ಮಿಷ ಝಾಡಿಸಿ ಝಾಡಿಸಿ
ಧ್ಯಾನ ಬಲಿದು ಸುವಾಸನೆಕಳಲ ಕಡೆವದಾರಂಭಿಸಿ ೨

ನಾಮದಿವ್ಯಮಂತ್ರವ ಕಟ್ಟಿ ವಿಷಮ ಬಿಡಿಸಿ ವಿಷಮಬಿಡಿಸಿ
ನೇಮದಿಂದ ಸುಪ್ರೇಮದರವಿಗಿ ಘಮಗುಡಿಸಿ ಘಮಗುಡಿಸಿ
ಶಮೆದಮೆವೆಂಬ್ಹಗ್ಗನೆ ಸಮವಿಡಿದು ಧಿಮಿಗುಡಿಸಿ ಧಿಮಿಗುಡಿಸಿ
ಶ್ರಮಜನ್ಮದಹರುವ ಕ್ರಮಗೊಂಡಾಹಂಬಿಡಿಸಿ ೩

ನಾವು ನೀವೆಂಬ ಹೊಲೆಗುಡತಿಯನ್ಯರೆ ಬಿಡಿಸಿನ್ಯರೆಬಿಡಿಸಿ
ಸಾವಧಾನದಲಿ ಅನುಭವಾಮೃತ ನಿಜಕುಡಿಸಿ ನಿಜಕುಡಿಸಿ
ಭಾವದಲಿ ಸದ್ಗುರುದಯ ನವನೀತ ಝುಲ್ಲಿಸಿ ಝುಲ್ಲಿಸಿ
ಸವಿಸವಿಗೊಂಡು ಸುವಿದ್ಯಸಾರಾಯವ ಅನುಭವಿಸಿ ೪

ಕಡವು ಕುಶಲಿ ಒಬ್ಬಳೇ ಬಲುನಿಜಜ್ಞಾನಶಕ್ತಿ ಶಕ್ತಿ
ಒಡಗೂಡಲು ನಿಜಬಾಹುದು ಕೈಗೂಡಿ ಸದ್ಗತಿ ಸದ್ಗತಿ
ಪಡಕೊಂಡರು ಇದರಿಂದಲಿ ಮುನಿಜನ ವಿಶ್ರಾಂತಿ ವಿಶ್ರಾಂತಿ
ಕೊಂಡಾಡಿದ ಅನುಭವಸ್ತುತಿ ಮೂಢಮಹಿಪತಿ ೫

## ೩೮೯

ಕಣ್ಣಿಲಿ ನೋಡಿರೋ ಸಾಕ್ಷ
ಘನಗುರು ಪ್ರತ್ಯಕ್ಷ ಧ್ರುವ

ಕಣ್ಣಿನೊಳದೆ ನಿಜ ವಸ್ತದ ಖೂನ
ಪುಣ್ಯವಂತನೆ ಬಲ್ಲನುಸಂಧಾನ
ಧನ್ಯಗೈಸುವದನುಭವದ ಖೂನ
ತನ್ನೊಳಗದೆ ಗುರು ಆತ್ಮಜ್ಞಾನ ೧

ಕಣ್ಣಿನ ಹಿಂದಾಡುತಲದೆ ಮನ
ಕಣ್ಣಿಗೆ ಕಣ್ಣು ನೋಡಲುನ್ಮನ
ಕಣ್ಣಿನೊಳಾಡುತಲದೆ ಚಿದ್ಘನ
ಅಣುರೇಣುಕ ತಾ ಇದೆ ಪರಿಪೂರ್ಣ ೨

ಕಣ್ಣಿನೊಳಾಡುವ ಭಾಸ್ಕರ ಕರುಣ
ಭಿನ್ನವಿಲ್ಲದೆ ಚೆನ್ನಾಗ್ಯನುದಿನ
ಚಿನ್ನ ಮಹಿಪತಿಗೆ ನೋಡೇವ ಧ್ಯಾನ
ಧನ್ಯಗೈಸುವ ತಾ ದೀನೋದ್ಧರಣ ೩

## ೩೯೦

ಕಣ್ಣೇಲ್ಥೇಳುವ ಗುರು ಮಾತು
ಇನ್ನೊಬ್ಬರಿಗೆ ಇದು ಏನು ತಿಳಿದೀತು ಧ್ರುವ

ವೇದಾಂತಕಿದು ಸನ್ಮತಗೂಡುವ ಮಾತು
ಸಾಧುಜನರಿಗೆ ಸಾಕ್ಷಿಯಾಗಿ ದೋರುವ ಮಾತು
ಸಾಧನಕೆ ಸಾಧಿಸುವ ಮಾತು
ಬೋಧಿಸಿದವಗೆ ಬಲವಾಗುವ ಮಾತು ೧

ಕೋಟಿ ಜನ್ಮದಾ ಪುಣ್ಯವಂತಗಿದಿರಿಡುವ ಮಾತು
ನೋಟ ನಿಜವಾದವಗೆ ನೀಟವಾಗಿಹ ಮಾತು
ಸೂಟಿಗಿದೆ ಘನಕೂಟ ಮಾತು
ನಾಟಿಮನದೊಳು ಮಥಿಸುವ ಮಾತು ೨

ದ್ವೈತ ಅದ್ವೈತಕ ಆಧಾರವಾಗುವ ಮಾತು
ತ್ರಯಗುಣಕ ಮೀರಿ ಮಿಗಿಲಾಗಿ ದೋರುವ ಮಾತು
ಮಹಿಪತಿಯ ಗುರುಗೂಢ ಮಾತು
ತ್ರಯಲೋಕಕಿದೆ ತಾರಿಸುವ ಮಾತು ೩

## ೩೯೧

ಕರವ ಮುಗಿದು ಗುರುವಿನ ನೀ ಅರಿಯೊ ಸುಹಿತಾರ್ಥಿಯ
ನೆರೆಯೊ ದೀರ್ಘದಂಡಹಾಕಿ ತರಣೋಪಾಯ ಮೂರ್ತಿಯ
ಬೆರಿಯೋ ಕುರುವ್ಹ ತಿಳಿವ ಪರಮಭಕ್ತಿ ಮನೆಮೂರ್ತಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೧

ಕರೆವ ಮಳೆಯು ಕರುಣಿಸಿನ್ನು ಪರಮದಯ ವೃತ್ತಿಯ
ಶರಣ್ಹೋಕ್ಕಾಶ್ರೈಸೊ ನೀನು ತ್ವರಿತ ಶ್ರೀಪತಿಯ
ಮರಿಯದೆ ಕೊಂಡಾಡಬೇಕು ಧರೆಯೊಳಿದೆ ಕೀರ್ತಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣ ಗುರುಮೂರ್ತಿಯ ೨

ಯರಕವಾಗಿ ಸರಕನಿನ್ನು ನೀನು ಕರಕೊ ದೃಢಭಕ್ತಿಯಾ
ಅರಕಕೋಟಿ ತೇಜನಂಘ್ರಿ ಹರಿಕಿಸೊ ನೀ ಪೂರ್ತಿಯಾ
ಗರಕನೆವೆ ಅರಿಕೆಮಾಡಿಕೊಂಡು ಸುಸಂಗತಿಯ
ತರಕೈಸಿಕೊಳ್ಳು ಶ್ರೀಪಾದ ಪೂರ್ಣಗುರುಮೂರ್ತಿಯ ೩

ಏರು ಅರು ಚಕ್ರ ನೋಡಿ ತಾರಿಸುವ ಸ್ಥಿತಿಯ
ಅರವೆ ಅರವೆ ಆಗಿ ದೋರುತದೆ ಸುಜಾಗ್ರತಿಯ
ಎರಗಿ ಹರುಷದಿಂದ ಪಡೆಯೊ ಪರಮ ವಿಶ್ರಾಂತಿಯ
ಸ್ಮರಿಸೊಮನವೆ ಚರಣಕಮಲ ಪೂರ್ಣ ಗುರುಮೂರ್ತಿಯ ೪

ಸುರರ ವಂದ್ಯ ಪರಮಭೇದ್ಯ ಅರಿಯಾ ಪರಗತಿಯ
ಸಾರತಿಹ ಶ್ರುತಿವಾಕ್ಯ ಕೇಳೊ ಇಟ್ಟು ಪ್ರೀತಿಯ
ತ್ಯರನೆ ತಿಳುಹಿಸಿಕೊಟ್ಟ ಗುರುವಿಗೆ ನಿತ್ಯಪ್ರತಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೫

ಗುರುಮೂರ್ತ್ಯಾಭೇದ್ಯವೆಂಬ ಗುರುತಕೇಳೋ ಅರ್ಥಿಯ
ಕುರಹು ದೋರಿಕೊಟ್ಟ ಗುರುವಿಗೆ ನೀ ಮಾಡೊ ಸ್ತುತಿಯ

ಮರೆದುಬಿಡೊ ತರಳತನದ ಹರುವಾ ನಿನ್ನಭ್ರಾಂತಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೬

ತರತರದಿ ಸಾಂದ್ರವಾಗಿ ದೋರುತಿಹ ದೀಪ್ತಿಯ
ಪ್ರಾರ್ಥಿಸಬೇಕೊಂದೆ ಸರ್ವಕಾಲ ವಸ್ತುಗತಿಯ
ಪರಿಪರಿಸುಖ ದೋರುವ ಕರುಣಾನಂದ ಯತಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೭

ಸರ್ವಸುಖದೋರ್ವದೊಂದೆ ಸರ್ವಫಲ ಶ್ರುತಿಯ
ಸರ್ವದಾವೆಂಬುವದು ನವರತ್ನಮಾಲೆ ಸ್ತುತಿಯ
ಪೂರ್ವಕರ್ಮ ಹರಿಸುವ ಸದ್ಗುರು ಸಾಮರ್ಥ್ಯಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೮

ಶರಣಜನರಾಭರಣವಿದೆ ಅರಿಯಬೇಕೀವಾರ್ತೆಯ
ತರಳ ಮಹಿಪತಿ ನೀ ಮಾಡೊ ಇರುಳ ಹಗಲ ಆರ್ತಿಯ
ಕರವ ಪಿಡಿದು ಪಾರಗೆಲಿಸುವ ನಿನ್ನ ಸಾರ್ಥಿಯ
ಸ್ಮರಿಸೊ ಮನವೆ ಚರಣಕಮಲ ಪೂರ್ಣಗುರುಮೂರ್ತಿಯ ೯

## ೩೯೨

ಕರುಣಸಾಗರ ವರಮುನಿಗಳ ಪ್ರಾಣ
ಶರಣಜನರಾಭರಣ ನಮ್ಮ ಶ್ರೀ ಗುರುನಾಥ ೧

ಮೂರುಮೂರುತಿನೀತ ಮೂರು ಲೋಕ ವಂದಿತ
ಮೂರುಗುಣರಹಿತ ನಮ್ಮ ಶ್ರೀಗುರುನಾಥ ೨

ನಂಬಿದವರ ಕಾವ ಹಂಬಲಿಸುವ ಜೀವ
ಅಂಬುಜಾಕ್ಷನೆ ಶ್ರೀದೇವ ನಮ್ಮ ಶ್ರೀ ಗುರುನಾಥ ೩

ಭಕ್ತವತ್ಸಲನೀತ ಭಕ್ತರ ಭಾವಪೂರಿತ
ಶಕ್ತನಹುದಯ್ಯನೀತ ನಮ್ಮ ಶ್ರೀ ಗುರುನಾಥ ೪

ಇಹಪರ ನಮಗೀತ, ಸಾಹ್ಯದಲಿ ಸಮರ್ಥ
ಮಹಿಪತಿ ಪ್ರಾಣನಾಥ ನಮ್ಮ ಶ್ರೀ ಗುರುನಾಥ ೫

## ೩೯೩

ಕರುಣಿಸಿ ಗುರುದಯ ಮಾಡೊ ಶಿರದಲ್ಲ
ಭಯ ನಿಜ ನೋಡೊ ಧ್ರುವ

ನೋಡದೆ ನೀ ಗುಣದೋಷ ಮಾಡೊ ಸದ್ಗುರು ಉಪದೇಶ
ಕಡಿವದು ಭವಭಯಪಾಶ ಕೊಡುವದಾನಂದದ ಹರುಷ ೧

ಉಪಾಯದ ಗುಣವರಿಯ ಸುಪಥದೋರು ಶ್ರೀಹರಿಯೆ
ಉಪಕಾರವು ನಾ ಮರೆಯೆ ಕೃಪೆಯುಳ್ಳ ನೀ ಧೊರಿಯೆ ೨

ಕರುಣಾನಂದದ ಮಳೆಗರಿಯೊ
ತರಣೋಪಾಯದ ಸುಖಬೆರಿಯೊ
ಮೂರುಗುಣದ ಬಲಿ ಹರಿಯೊ ತರಳ
ಮಹಿಪತಿಯ ನೀ ಹೊರಿಯೊ ೩

## ೩೯೪

ಕರುಣಿಸೊ ಗುರು ಎನಗೆ
ಅರಘಳಿಗಿ ನೀ ಎನ್ನ ಹೃದಯದಿಂದಲಗದ್ಹಾಂಗೆ ಧ್ರುವ

ಕಣ್ಣಿನೊಳಗ ನಿನ್ನ ಕಾಣದಿದ್ದರೆ ಪೂರ್ಣ
ಪ್ರಾಣನಿಲ್ಲದೊ ನಿಮಿಷಾರ್ಧದಲಿ
ಕ್ಷಣಕ್ಷಣಕ್ಕೊದಗಿ ನೀ ಖೂನದೋರದಿದ್ದರೆ
ತನು ವಿಕಳಿತವಾಗಿ ಕ್ಷೀಣಹೊಂದುವದೊ ೧

ಬೇಡುವದೊಂದೆ ನಾ ಬಿಡದೆ ನಿಜರೂಪ
ಪೊಡವಿಯೊಳಗೆ ದೃಢ ನಿಶ್ಚಯಲಿ
ಎಡಬಲವು ನೋಡದೆ ಒಡಲ ಹೊಕ್ಕಿದೆ ನಿನ್ನ
ಕಡೆಗಾಣಿಸುವದೆನ್ನೊಡೆಯನೆ ಪಿಡಿದು ಕೈಯ ೨

ಸುತ್ತಸೂಸುತಲಿನ್ನು ಚಿತ್ತದಿಂದಗಲದೆ
ನಿತ್ಯವಾಗಿರೊ ನೀ ಹೃತ್ಕಮಲದಲಿ
ಹೆತ್ತ ತಾಯಿಯೋಪಾದಿ ತುತ್ತುತುತ್ತಿಗೆ ಒಮ್ಮೆ
ಹತ್ತಿಲಿದ್ದು ಸಂತತ ಸಲಹೊ ಮಹಿಪತಿಗೆ ೩

## ೩೯೫

ಕರುಣಿಸೊ ಗುರು ಎನಗೆ ಸ್ಮರಿಸು ಹಾಂಗೆ
ದೋರು ನಿಮ್ಮರುಹ ಬ್ಯಾಗೆ ಗುರುತಲೀಗೆ ೧

ನಿನ್ನವನೆ ಎಂದೆನಿಸೊ ಭಿನ್ನ ಹರಿಸೊ
ಎನ್ನ ದಯದಿ ಪಾಲೆಸೋ ಧನ್ಯಗೈಸೊ ೨

ಅನುದಿನದಿ ಕಾಯೊ ನೀ ಬಂದು ಅನಾಥ ಬಂಧು
ದೀನಾನಾಥ ನೀ ಎಂದೆಂದು ಘನ ಕೃಪಾಸಿಂಧು ೩

ಭಕ್ತ ಜನರನುಕೂಲ ಭೋಕ್ತಸಕಲ
ಶಕ್ತ ನೀನಹದೊ ಕೃಪಾಲ ಬಕ್ತ ವತ್ಸಲ ೪

ಅನುಭವಸುಖ ಬೀರಿಸೊ ಖೂನದೋರಿಸೊ
ದೀನ ಮಹಿಪತಿ ತಾರಿಸೊ ಘನಸುರಿಸೊ ೫

## ೩೯೬

ಕರುಣಿಸೊ ಗುರು ತಾರಿಸೊ
ಶರಣರಕ್ಷಕ ನಮ್ಮ ಕರುಣಾಕರ ದೇವ ಧ್ರುವ

ಬವಜನ್ಮದಲಿ ಬಂದು ಬಹುಬಳಲಿದೆ ನಾನು
ಮೂವಿಧಿ ಬಲೆಯೊಳು ಸಿಲುಕಿ ಜೀವನವು
ಅವಿದ್ಯದಾಟಕೆ ಐವರು ಕೂಡಿ ತಾ
ಜೀವನ ಮುಕ್ತಿಗಾಣಿಸಗೊಡದಿಹರು ೧

ಮೂರೊಂದು ಮಂದಿಯು ಸೇರಗೊಡದೆ ಪಥ
ಆರುಮಂದಿಯ ಕೂಡಿ ಕಾಡುತಲಿ
ಆರು ಮತ್ತೆರಡುಮಂಡೆಯ ಕಾವಲಿಗೆ ನಾನು
ಆರೆನಯ್ಯ ಶ್ರೀಗುರುಶಿರೋಮಣಿಯೆ ೨

ಹತ್ತು ಹೊಳಿಯು ಸುತ್ತ ಅಡ್ಡಗಟ್ಟಿಹುದು
ಮುಕ್ತಿಗೈದುವ ಪಥ ನಡಲೀಸದೆ
ಇಂತಿವ ತಾರಿಸಿ ಮೂಢಮಹಿಪತಿಯ
ಸಂತತ ಸದ್ಗತಿಸುಖ ಈವುದೆನಗಿನ್ನು ೩

## ೩೯೭

ಕರುಣಿಸೊ ಗುರುವೆ ಚರಣ ಸ್ಮರಣೆಯು ನಿಮ್ಮ ಧ್ರುವ

ಸ್ಮರಿಸಲಿಕ್ಕೆ ನಾ ನಿಮ್ಮ ತರಳ ಪ್ರಹ್ಲಾದನಲ್ಲ
ಅರಿತು ಮಾಡುವದು ದಯ ತರಣೋಪಾಯದ ೧

ಒಲಿಸಿಕೊಳ್ಳಲು ನಿಮ್ಮ ಫಲ್ಗುಣನಂಥವನಲ್ಲ
ಗೆಲಿಸುವದೊ ನೀ ಸುಪಥ ನೆಲೆನಿಭದೋರಿ ೨

ಮೊರೆ ಇಡಲು ನಾ ನಿಮ್ಮ ಕರಿರಾಜನಂಥವನಲ್ಲ
ಕರುಣಿಸುವದೊ ಎನಗೆ ಕರವಿಡಿತು ಪೂರ್ಣ ೩

ಶರಣ ಹೋಗಲು ನಿಮ್ಮ ಧೀರ ವಿಭೀಷಣನಲ್ಲ
ಪಾರ ಗೆಲಿಸುವದೊ ನಿಮ್ಮ ವರಕೃಪೆಯಿಂದ ೪

ಭಕ್ತಿ ಮಾಡಲು ನಿಮ್ಮ ಶಕ್ತಸಮಥನಲ್ಲ
ಯುಕ್ತಿದೋರುವದೊ ನಿಮ್ಮ ಮುಕ್ತಿಮಾರ್ಗದ ೫

ಸ್ತುತಿಯ ಮಾಡಲು ನಿಮ್ಮ ಅತಿಶಯ ಭಕ್ತ ನಾನಲ್ಲ
ಗತಿಸುಖದೋರುದೆನಗೆ ಪತಿತಪಾವನ ೬

ದಾಸರ ದಾಸನೆಂದು ಲೇಸಾಗಿ ಮಹಿಪತಿಗೆ
ವಾಸನೆ ಪೂರಿಸೊ ಪೂರ್ಣ ದೇಸಿಗರ ದೇವ ೭

## ೩೯೮

ಕರುಣಿಸೋ ಗುರು ತಾರಿಸೋ
ಶರಣರಕ್ಷಕ ನಮ್ಮ ಕರುಣಾಕರ ದೇವ ಧ್ರುವ

ಭವ ಜನ್ಮದಲಿ ಬಂದು ಬಹು ಬಳಲಿದೆ ನಾನು
ಮೂವಿಧ ಬಲೆಯಲಿ ಸಿಲುಕಿ ಜೀವನವು
ಅವಿದ್ಯ ದಾಟಕ ಐವರು ಕೂಡಿ ತಾಂ
ಜೀವನ ಮುಕ್ತಿಗಾಣಿಸಗುಡದಿಹರು ೧

ಮೂರೊಂದು ಮಂದಿಯ ಸೇರುಗುಡದೆ ಪಥ
ಅರುಮಂದಿಯು ಕೂಡಿ ಕಾಡುತಲಿ
ಆರುಮತ್ತೆರಡು ಮಂದಿಯ ಕಾವಲಿಗೆ ನಾನು
ಆರಯ್ಯ ಶ್ರೀಗುರು ಶಿರೋಮಣಿಯ ೨

ಹತ್ತು ಹೊಳೆಯ ಸುತ್ತ ಅಡ್ಡಗಟ್ಟಿಹುದು
ಮುಕ್ತಿ ಗೈದುವ ಪಥ ನಡಲೀಸದೆ
ಇಂತವತಾರಿಸಿ ಮೂಢ ಮಹಿಪತಿಯ
ಸಂತತಸದ್ಗತಿ ಸುಖ ಈವ ಘನಗಿನ್ನು ೩

## ೩೬೯

ಕಾಣಬಹುದಕೆ ಕನ್ನಡಿಯಾಕೆ ಭಿನ್ನವಿಲ್ಲದೆ ನೋಡಿ
ತನ್ನೊಳು ಘನಬ್ರಹ್ಮವಿರಲಿಕ್ಕೆ ಅನುಮಾನವು ಬ್ಯಾಡಿ ಧ್ರುವ

ಕುಂಭಿನಿಯೊಳು ಘನಹೊಳೆಯುತ ತುಂಬಿತುಳುಕುತಲ್ಯಾದೆ
ಉಂಬವರಿಗಿದಿರಿಡುತ ಬಿಂಬಿಸುತಲ್ಯಾದೆ
ಹಂಬಲಿಸಿದರೆ ತನ್ನೊಳಗೆ ತಾ ಗುಂಭಗುರುತವಾಗ್ಯಾದೆ
ಡಿಂಬಿನೊಳಗೆ ನಿಜದೋರುತ ಇಂಬು ತಾನೆ ಆಗ್ಯಾದೆ ೧

ಹೇಳುವ ಮಾತಿನ ಮಾತಿಲ್ಲ ಕೇಳಿರಯ್ಯಾ ಚೆನ್ನಾಗಿ
ಒಳ ಹೊರಗಿದು ಭಾಸುತಿ ಹ್ಯ ದೆಲ್ಲಾ ಸುಳವು ಬಲ್ಲಾತ ಯೋಗಿ
ಕಳೆಕಾಂತಿಗಳ ಅನುಭವವೆಲ್ಲಾನು ತಿಳಿಯಬಲ್ಲವ ಭೋಗಿ
ಹೊಳೆವುತಿಹ್ಯದು ಸರ್ವಮಯವೆಲ್ಲಾ ಮೊಳೆಮಿಂಚು ತಾನಾಗಿ ೨

ಇಲ್ಲೆವೆ ಎರಡು ಹಾದಿಯ ಕಟ್ಟಿಗುಲ್ಲುಮಾಡದೆ ನೋಡಿ
ಮ್ಯಾಲಿಹ್ಯ ಸ್ಥಾನಸ್ಥಾನವ ಮುಟ್ಟಿ ಮೂಲಸ್ಥಾನವ ಕೂಡಿ
ಗೋಲ್ಲಾಟ ಮಂಡಲವನು ದಾಟಿ ಅಲ್ಲಿಯೆ ಮಹಿಪತಿ ನೋಡಿ
ಅಲ್ಲಿಯೆ ಮನ ತಾಂ ಮನಿಕಟ್ಟಿ ಫುಲ್ಲನಾಭನ ಕೂಡಿ ೩

## ೪೦೦

ಕಾಣಬಾಹ ಸಾಧನ ಒಂದೇ ಮಾಡಿ
ಅಣುರೇಣುದೊಳಗಾನೆ ಗುರು ನೋಡಿ ಧ್ರುವ

ಖೂನ ಮಾಡಲಿಕ್ಕದ ಒಂದಭ್ಯಾಸ
ಅನುದಿನ ಸದ್ಗುರು ನಿಜಧ್ಯಾಸ
ಸುಜನರಿಗಿದೆ ತಾ ಉಲ್ಲಾಸಾ
ಜನುಮದೊಳಿದೆ ಸುಪ್ರಕಾಶ ೧

ಕೋಟಿಗೊಂದೆ ಸಾಧನವಿದೆ ಸಾಕು
ಅಟಾಆಟಬಡುವದ್ಯಾತಕೆ ಬೇಕು
ಘಟಮಠ ಎಂಬುವದೆಲ್ಲ ಹೋಕು
ನಿಟಿಲ ಭ್ರೂಮಧ್ಯ ನೋಡಿ ಥೋಕು ೨

ಸಾಧನವೆಂಬುದು ಗುರುದಯ
ಇದೆ ಪಡಕೊಂಡವಗೆ ವಿಜಯ
ಬೋಧಿಸಿದ ಭಾನು ಕೋಟಿ ಉದಯ
ಸದ್ಗೈಸಿದ ನೋಡಿ ಮಹಿಪತಿಯ ೩

## ೪೦೧

ಕಾಯಬೇಕೆನ್ನ ನೀ ಸದ್ಗುರು ರನ್ನಾ
ಕಾಯೋ ನಂಬಿದೆ ನಾನು ಪ

ಮರಹು ಮುನಿಯನು ಸೇರಿದೇ
ನಾ ನನ್ನೊಳಗ ಅರವಪಥಜರಿದೇ
ಕರುಣಾ ಸಾಗರ ನೆಂದು
ಮೊರೆಯ ಹೊಕ್ಕೆನುಬಂದು
ತರಣೋಪಾಯವೆನ್ನೊಳು ಸಾರಿ
ಉದಾರೀ ದಯ ಬೀರಿ ೧

ಆರರಿಗಳ ಕಾಟದೀ ಅವರಾಕೂಡೀ
ತೊರುವ ವಿಷಯದಾಟದೀ
ಮೀರಲಾರೆನೋ ನಾನು
ಪಾರ ವಶ್ಯನಾದೆನೋ
ಶ್ರೀರಮಣನ ದಯದೊಲವಾ
ನಿಶ್ಚಲವಾ ಕಳವಳವಾಗಳವಾ ೨

ಮೂರು ಮನೆಗಳಿಂದಲೀ
ಮೀರಿದ ತೂರ್ಯಾಗಾರವ ಸುಖದಿಂದಲಿ
ಸಾರುವಂದದಿ ಮತಿ
ಬೀರೊ ಶ್ರೀಮಹಿಪತಿ
ತಾರಿಸೋ ಕೊಟ್ಟು ನಿನ್ನೆಚ್ಚರವೆ
ಘನ ಬೆರುವೆ ನಿಜದರುವೇ ಸುರತರುವೆ ಗುರುವೆ ೩

## ೪೦೨

ಕಾಯೊ ಕರುಣಾನಂದ ಶ್ರೀಗುರು ಕೃಪಾನಿಧೆ
ಕಾಯೊ ಕರುಣಿಸಿ ಎನ್ನ ಪೂರ್ಣ ನೀ
ಕಾಯೊ ಪರಮದಯಾನಿಧೆ ಧ್ರುವ

ತೊಡಿಸಿ ಕರುಣಾನಂದ ಕವಚವ ಇಡಿಸೊ ಭಗುತಿ ವೈರಾಗ್ಯವ
ದೃಢಗೊಳಿಸುವ ಜ್ಞಾನಪೂರ್ಣ ನೀ ಕಡಿಸೊ ಕಾಮಕ್ರೋಧವ
ನಡೆಸಿ ನಿತ್ಯವಿವೇಕ ಪಥದಲಿ ಕೂಡಿಸೊ ನಿಜಸುಬೋಧವ
ಬಿಡಿಸೊ ಭವಭವ ಮೂಲದಿಂದಲಿ ಬಡಿಸೊ ಹರುಷಾನಂದವ ೧

ಹುಟ್ಟು ಹೊಂದುವ ಬಟ್ಟೆ ಮುರಹಿಸಿ
ಕೊಟ್ಟು ಕಾಯೊ ಸತ್ಸಂಗವ
ಗುಟ್ಟಿನೊಳು ನಿಜಘಟ್ಟಿಗೊಳ್ಳಿಸಿ ನೀ
ಮುಟ್ಟಿಮುದ್ರಿಸೊದೃಷ್ಟಾಂತವ

ನಿಟಿಲನಯನ ಬ್ರೂಮಧ್ಯದೆರೆಸಿ ನೀ
ಸಟೆಯ ಮಾಡೊ ಅವಿದ್ಯವ
ನಿಷ್ಠತನ ನೆಲೆಗೊಳಿಸಿ ಕಾಯೊ ನೀ ಇಟ್ಟು ಶಿರದಲಿ ಅಭಯವ ೨

ಭಿನ್ನವಿಲ್ಲದೆ ನೋಡಿ ಎನ್ನನು ಧನ್ಯಗೈಸೊ ನೀ ಪ್ರಾಣವ
ಕಣ್ದೆರಿಸಿ ಅಣುರೇಣುದಲಿ ಪೂರ್ಣಖೂನದೋರೊ ಸಾಕ್ಷಾತವ
ಎನ್ನೊಳಗೆ ನಿಜಾನಂದ ಸುಖದೋರಿ ಪುಣ್ಯಗೈಸೊ ನೀ ಜೀವನ
ಚಿಣ್ಣಕಿಂಕರ ದಾಸ ಮಹಿಪತಿ ರಕ್ಷಿಸೊ ಸಂತತವ ೩

## ೪೦೩

ಕಾಯೊ ಕರುಣಾಬ್ಧಿ ಗುರು ಎನಗೆ
ದಯವುಳ್ಳ ಸ್ವಾಮಿ ನೀನಹುದೊ ಜಗದೊಳಗೆ ಧ್ರುವ

ಶಿರದಲಭಯವ ನೀಡಿ ಕರುಣದಯದಲಿ ನೋಡಿ
ಹರುಷ ಮನವನು ಮಾಡಿ ದುರಿತಭವ ಈಡ್ಯಾಡಿ
ಗುರುತ ನಿಜ ಮಾಡರಹು ನೀಡಿ
ಪರಮ ಗತಿ ಇದರಿಡಿ ವರಕೃಪೆಯ ಮಾಡಿ ೧

ಒಂದು ಪಥವನು ತಿಳಿಸಿ ದ್ವಂದ್ವ ಭೇದವನಳಿಸಿ
ಸಂದೇಹವನು ಕಳಿಸಿ ಕುಂದ ದೋಷವ ತೊಳಿಸಿ
ಒಂದರೊಳು ನಿಲಿಸಿ ನೆಲೆಗೊಳಿಸಿ
ಸಂದು ಜನ್ಮಗಳಳಿಸ್ಯಾನಂದ ಸುಖ ಹೊಳಿಸಿ ೨

ಕರುಣಿಸೊ ಗುರು ಎನಗೆ ಶರಣ ಹೊಕ್ಕಿದೆ ನಿಮಗೆ
ದೋರುದನುಭವ ಈಗೆ ಕರಗಿ ಮನವೆರಗುವ್ಹಾಂಗೆ
ಸ್ಮರಣ ಸುಖ ಎದುರಿಡು ಬ್ಯಾಗೆ
ತರಣೋಪಾಯದಲೆನಗೆ ಪೊರೆಯೊ ಮಹಿಪತಿಗೆ ೩

## ೪೦೪

ಕಾಯೊ ಕಾಯೊ ಕಾಯೊ ಕಾಯೊ ದಯಾನಿಧಿ
ಕಾಯೊ ಕರುಣ ಕೃಪಾಳ
ಕಾಯೊ ದಯದಲೆನ್ನ ದೇವಾಧಿದೇವ ಶ್ರೀದೇವ
ಸದ್ಗುರು ಘನಲೋಲ ಧ್ರುವ

ಎನ್ನಹೊಯಿಲ ನಿಮಗೆಂತು ಮುಟ್ಟುವದಾನಂತಗುಣಮಹಿಮೆ
ಚಿಣ್ಣ ಕಿಂಕರನಾದ ಅಣುಗಿಂದತ್ತಲಿ ಹೀನ ದೀನ ನಾ ಪರಮ
ದಣ್ಣನೇ ದಣಿಯುತಿಹ್ಯರು ಬ್ರಹ್ಮಾದಿಗಳು
ಖೂನತಿಳಿಯಲು ನಿಮ್ಮ
ಎನ್ನದೊಂದಿದರೊಳುಗುಪಿತವೇನೊ ಹರಿ ನೀನೆ
ಕೃಪಾಸಿಂಧು ನಿಮ್ಮ ೧

ಅನಂತಕೋಟಿ ಬ್ರಹ್ಮಾಂಡನಾಯಕನೆಂದೊದರುತಿಹಾನಂತ ವೇದ
ಅನಂತಾನಂತಾನಂತ ಮಹಿಮರು ಸ್ತುತಿಸುತಿಹರು ಸರ್ವದ
ಸನಕ ಸನಂದನ ಮೊದಲಾದವರು ತಾವು
ತಿಳಿಯದೆಂಬರು ಗುಹ್ಯ ಅಗಾಧ
ಅನುಕೂಲಾಗಿಹ ನಿಮ್ಮ ಸತಿಯಂಬಳು ಪೂರ್ಣ
ತಿಳಿಯದು ಮಹಿಮ್ಯಂಗುಷ್ಟದ ೨

ನಾರದ ತುಂಬರರೆಲ್ಲ ಗಾಯನದಲ್ಲಿ
ಮಾಡುವರಾನಂದ ಘೋಷ
ಇರುಳು ಹಗಲೆ ನಿಮ್ಮ ಹೊರಳುವ ಹಾಸಿಕೆ
ದೋರುವ ಹರುಷ ತಾ ಶೇಷ
ಸುರಮುನಿ ಜನರೆಲ್ಲ ಚರಣಕಮಲಕೆ ಹಚ್ಚಿದರು ನಿಜಧ್ಯಾಸ
ಪರಿಣಿಸಲಾಗದು ಪರಿಪರಿಯಲಿ ನಿಮ್ಮ
ಸಿರಿಲೋಲ ನೀ ಸರ್ವೇಶ ೩

ಸಾಮಗಾಯನ ಪ್ರೀಯ ಸಾಮಜವರದಾತ
ಸಕಲಾಗಮ ಪೂಜಿತ
ಸಮಸ್ತ ಲೋಕಪಾಲಕ ನೀನಹುದೊ ಸ್ವಾಮಿ
ಸದ್ಗುರು ಶ್ರೀನಾಥ
ಕಾಮಪೂರಿತ ಕರುಣಾನಂದಮೂರುತಿ ಯೋಗಿಜನ ವಂದಿತ
ನಾಮಸ್ಮರಣಿ ಕಾಮ ನಿಮ್ಮ ಕಾಮಧೇನಾಗಿಹ ಭಕ್ತ
ಜನರಿಗೆ ಸಾಕ್ಷಾತ ೪

ವಾಲ್ಗೈಸಿಕೊಂಬುವ ಭಕ್ತಿ ಅರಿಯೆ ನಾನು
ಸಲಹುವದೋ ನೀ ಶ್ರೀಹರಿಯೆ
ಮೂಲದಲಿ ಮೂಢ ಮಂದಮತಿ ನಾನು ಪಾಲಿಸೊ
ನೀ ಎನ್ನ ಧೊರೆಯೆ
ಸಲೆ ಮೊರೆಹೊಕ್ಕಿಹ ನಿಮ್ಮ ಶ್ರೀಪಾದಕೆ ಸ್ವಾಮಿ ಸದ್ಗುರು
ಮುರ ಅರಿಯೆ
ಬಾಲಕ ಮಹಿಪತಿ ಕುಲಕೋಟಿ ಉದ್ಧರಿಸುವ ನೀನೆ
ಸಕಲಪೂರ್ಣಸಿರಿಯೆ ೫

## ೪೦೫

ಕಾಯೊ ಕಾಯೊ ಗುರುನಾಥತ್ರಯಗುಣಾತೀತ ಧ್ರುವ

ದೀನದಯಾಳು ನಿಶ್ಚಯ ಮುನಿಜನಂಘ್ರಿಯ
ಭಾನುಕೋಟಿ ಸುಪ್ರಭೆಯ
ಅನುದಿನಕ್ಷಯ ಘನಮಹಿಮರ ಹೃದಯ ಆನಂದೋದಯ
ಅನಾಥರಿಗೆ ಆಶ್ರಯ ನೀನಹುದೊನಮ್ಮಯ ೧

ದೇಶಿಕರಿಗೆ ನೀ ದೇವ ಲೇಸಾಗಿ ಕಾವ ಋಷಿ ಮುನಿಗಳ ಸಂಜೀವ
ವಾಸವಾಗಿವ್ವ ವಿಶ್ವಾತ್ಮನಹುದೊ ಶ್ರೀದೇವ
ಭಾಸುತಲಿವ್ವ ಭಾಷೆಯ ಪಾಲಿಸುವ ಈಶ ನೀನೆ ಕೇಶವ ೨

ಬಾಹ್ಯಾಂತ್ರದಲಿನೀ ಸುಪಥ ತ್ರಾಹಿ ತ್ರಾಹಿ ಶ್ರೀಗುರುನಾಥ
ಬಾಹ್ಯಾಂತ್ರ ನೀ ಸದೋದಿತ
ಗುಹ್ಯಗುರುತು ಶ್ರೀಹರಿ ನೀನೆ ಸಾಕ್ಷಾತನಹುದೊ
ಸ್ವಹಿತ ಇಹಪರ ನೀನು ದಾತಮಹಿಪತಿ ಪ್ರಾಣನಾಥ ೩

## ೪೦೬

ಗಳಿಸಿದೆನು ಗಳಿಸಿದೆನು ಘಳಿಗಿಯೊಳಗೆ
ಗಳಿಸಿದಾಗಳಿಗೆ ಅಂತಃಕರಣದೊಳಗೆ ಧ್ರುವ

ಗಳಿಸಿದೆನು ಗುರುಕರುಣ ಗಳಿಸಿದೆನು ಗುರುಚರಣ
ಗಳಿಸಿದೆನು ಗುರುಸ್ಮರಣ ಚಿಂತನಿಯನು ೧

ಗಳಿಸಿದೆನು ಗುರುಜ್ಞಾನ ಗಳಿಸಿದೆನು ಗುರುಮೋನ
ಗಳಿಸಿದೆನು ಗುರುಜ್ಞಾನ ಧಾರಣವನು ೨

ಗಳಿಸಿದೆನು ಇಳಯೊಳು ಮಹಿಪತಿ ಇಹ್ಯ ಪರದೊಳು
ಸಾಯುಜ್ಯ ಸದ್ಗತಿಯ ಮುಕ್ತಿಗಳು ೩

## ೪೦೭

ಗುರುಕೃಪೆಯಿಂದಲಿ ಪರಬ್ರಹ್ಮ ನೋಡೆಂದು
ಹೊಯ್ಯಂದ ಡಂಗುರವ
ಪರಂಜ್ಯೋತಿ ಪ್ರಭೆಯ ಭಾಸಿಸುವದು ನೋಡಿ ಹೊ
ಅರವ್ಹೆ ಅಂಜನವಾಗಿ ದೋರುತಲದಕೊ ಹೊ
ಪರಮ ಪ್ರಕಾಶವು ಪರಿಣಾಮಿಸಿ ನೋಡಿ ಹೊ ೧

ಅನಿಮಿಷನೇತ್ರವು ಬಾಗಿಸುವದು ನೋಡಿ ಹೊ
ಮನವಿಗೆ ಆರುವಾಗಿ ದೋರುತಲದಕೊಹೊ
ನೆನವ ಘನವಾಗಿ ಸೂಸೂತಲಿದಕೊ ಹೊ
ಕನಸು ಕಥೆ ಅಲ್ಲ ಕಣ್ಣಾರ ಕಾಂಬೋದು ಹೊ ೨

ನಿದ್ರಸ್ಯಕರ್ಣದ ಸಾದ್ಯಶ್ಯ ನೋಡೆಂದು ಹೊ
ದ್ವಾದಶ ನಾದವು ಸಾಧಿಸಿ ಕೇಳುದು ಹೊ
ಗಾದೆಯ ಮಾತಲ್ಲ ಭೇದಿಸಿ ತಿಳಿಯುದು ಹೊ
ಓದುವ ಒಂಕಾರ ನಾದವು ತಿಳಿವದು ಹೊ ೩

ಪ್ರಣಮ್ಯ ಮಂತ್ರದ ಪ್ರಚೀದಿನೋಡೆಂದು ಹೊ
ಹನ್ನೊಂದು ಹತ್ತುಸಾವಿರದ ನೂರೆಂದು ಹೊ
ಕಣ್ಣು ಮುಚ್ಚು ಕುಳಿತು ಮಣಿಯೆಣಿಸುವದಲ್ಲ ಹೊ
ಪುಣ್ಯಗತಿಗೈದಿಸುವ ಜಪವಿದು ಹೊ ೪

ವಿಶ್ವಹೊಳಗಲ್ಲ ಭಾಸ್ಕರ ಗುರುತಾನೆ ಹೊ
ಆಶಿಗೈವವಗಿನ್ನು ಭಾಸಿಸಲರಿಯನು ಹೊ
ಮೋಸ ಮುಕುರವಲ್ಲ ಭಾಸಿವ ಪಲ್ಲಟವಲ್ಲ ಹೊ
ಲೇಸಾಗಿ ಮಹಿಪತಿ ವಸ್ತು ಬೆರದನೋಡಿ
ಹೊಯ್ಕೆಂದ ಡಂಗುರವ ೫

## ೪೦೮

ಗುರುಜ್ಞಾನದ ಕೀಲು ಬ್ಯಾರ್‍ಯಾದ ನೋಡಿ ಬಲು ಮೇಲು ಧ್ರುವ

ಮೇಲಾಗಿ ಸ್ವಸುಖ ಸಾಧನ ಚಾಲ್ವರುತದ್ಯಾತಕ ತಾ ಜನ
ತಿಳಕೋಬಾರದ ಈ ನಿಜಖೂನ ಸುಲಲಿತ ನಿಜಧನ ೧

ಕೀಲು ತಿಳಿದವನ ಗುರುದಯಪಾತ್ರೆ
ಮೂಲೊಕದಲ್ಯವ ಪೂರ್ಣಪವಿತ್ರ
ನೆಲೆಗೊಂಡಿ ಹ್ಯ ಘನ ಚರಿತ್ರ ಬಲದಿಹ್ಯ ಬಾಹ್ಯಾಂತ್ರ ೨

ಮೌನದಲ್ಹೇಳುವ ಜ್ಞಾನುಪದೇಶ
ದೀನಮಹಿಪತಿ ಗುರುದೇವದೇವೇಶ
ಖೂನವಿಡವದು ಬಲುಸಾಯಾಸ ಮುನಿಜನರುಲ್ಲಾಸ ೩

## ೪೦೯

ಗುರುಜ್ಞಾನದ ಗುಟ್ಟು ಬ್ಯಾರದೆ ಕೇಳಿ ಕಿವಿಗೊಟ್ಟು ಧ್ರುವ

ಕೇಳಿಕಿಗ್ಯಾಗಲು ಕೇಳುವ ಧ್ಯಾನ ಕೇಳಿಸುವದು
ತನ್ನೊಳು ಪರಿಪೂರ್ಣ
ಒಳಹೊರಗಾನಂದ ಘನ ಹೊಳವದು ಗುರುಕರುಣ ೧

ಕಾಣಿದಕಾಗಲು ಕಾಂಬುವ ಖೂನ ಪ್ರಾಣಕ
ಪ್ರೀಯಾಗುದು ಸಾಧನ
ಅನುಭವಕಿದೆ ನಿಧಾನ ಜ್ಞಾನದ ಸುಜ್ಞಾನ ೨

ಎಡಬಲಕೆ ನೋಡದೆ ನೀ ಪೂರ್ಣವಿಡಿಯೊ
ಮಹಿಪತಿ ಸದ್ಗುರು ಚರಣ
ಪಡಿಯೊ ಸುದಯ ಕರುಣ ಬಿಡುವಂತೆ ಮನ ೩

## ೪೧೦

ಗುರುತ ಕೇಳುವ ಬನ್ನಿ ಗುರುವಿನ ಕೈಯ
ಅರವ್ಪಿಸಿ ಕೊಡುವ ಸದ್ಗುರು ನಮ್ಮಯ್ಯ ಧ್ರುವ

ಕೇಳದೆ ಹೇಳುವ ಕೇಳದ ಮಾತು
ತಿಳಿದುಕೊಳ್ಳಿರೊ ನಿಜ ಗೂಢವರಿತು ೧

ತಿಳಿದೇನಂದರ ತಿಳಿಯದು ಯೋಗ
ಹೊಳೆಯುತಲ್ಯದ ಮನದೊಳು ಅತಿಬ್ಯಾಗ ೨

ಗುರ್ತು ಹೇಳಿದ ಮಹಿಪತಿ ಗುರುಮೂರ್ತಿ
ಆರ್ಥಿಯಾಗದ ಯೋಗದ ಮನಮೂರ್ತಿ ೩

## ೪೧೧

ಗುರುದೈವದೊಲವೆನಗೆ ಬಲವೆ ಬಲವು
ಏರಿ ಬಿನಗು ದೈವದ ಬಲವು ಯಾತಕೆ ಹಲವು ಧ್ರುವ

ಗುರುನಯನದೊಲವೆನಗೆ ನವನಿಧಾನದ ಬಲವು
ಗುರುಅಭಯದೊಲುವೆ ನವಗ್ರಹದ ಒಲವು
ಗುರು ಅನುಗ್ರಹದೊಲವು ಎನಗೆ ಅನುದಿನ ಬಲವು
ಗುರು ಒಲುಮೆ ಎನಗೆ ಸಿರಿ ಸಕಲಬಲವು ೧

ಗುರು ದಯದೊಲವೆನಗೆ ತಾಯಿ ತಂದೆಯ ಬಲವು
ಗುರು ಕರುಣದೊಲವೆನಗೆ ಬಾಹುಬಲವು
ಗುರು ಬೋಧದೊಲವೆನಗೆ ಬಂಧುಗಳಗದ ಬಲವು
ಗುರು ಧರ್ಮದೊಲವೆನಗೆ ಸರ್ವ ಬಲವು ೨

ಗುರು ಪ್ರಭೆದೊಲವೆನಗೆ ಅನುಭವಾಶ್ರಯ ಬಲವು
ಗುರು ಜ್ಞಾನದೊಲವು ಘನ ದೈವ ಬಲವು
ಗುರುನಾಮದೊಲವೆನಗೆ ಪಕ್ಷವಾಗಿ ಹ್ಯ ಬಲವು
ತರಳ ಮಹಿಪತಿ ಸ್ವಾಮಿ ಬಲವೇ ಬಲವು ೩

## ೪೧೨

ಗುರುನಾಮ ಸ್ಮರಿಸಿರೊ ಶ್ರೀಗುರುನಾಮ
ಸುರುಮುನಿಜರ ಪ್ರಿಯವಾದ ನಾಮ ಧ್ರುವ

ಬ್ರಹ್ಮ ವಿಷ್ಣುರುದ್ರರಿಗಿದೆ ನಿಜನಾಮ
ಪ್ರೇಮದಿಂದ ಸ್ಮರಿಸುವರು ಇದೆ ನಾಮ
ಸಮಸ್ತ ಲೋಕಕ್ಕೆ ಸಾರವಾದ ನಾಮ
ನೇಮದಿಂದ ತಾರಿಸುವ ದಿವ್ಯನಾಮ ೧

ಸಕಲಾಗಮ ಪೂಜಿತರಿದೆ ನಾಮ
ಏಕೋಮಯವಾಗಿ ದೋರುವದಿದೆನಾಮ
ಶುಕವಾಮ ದೇವರಿಗಿದೆ ನಿಜ ನಾಮ
ಸುಖ ಸರ್ವರಿಗೆ ದೋರುವ ಗುರುನಾಮ ೧

ಕರ್ಮಬಂಧನ ಛೇದಿಸುವದಿದೆ ನಾಮ
ಕರ್ಮದೋರಿ ಕೊಡುವದೀ ಗುರುನಾಮ
ಬ್ರಹ್ಮಾನಂದ ಸುಖದೊರುವಾನಂದ ನಾಮ
ಧರ್ಮ ಜಾಗಿಸಿಕೊಡುವದೀ ಗುರುನಾಮ ೨

ಅಜಮಿಳಗೆ ತಾರಿಸಿದಿದೇ ನಾಮ
ಗಜಭಯ ಪರಿಹರಿಸಿದಿದೆ ನಾಮ
ಸುಜನರಿಗೆ ಸುಪ್ರಸನ್ನವಾದ ನಾಮ
ಮೂಜಗಕೆ ತಾಮುಖ್ಯವಾದ ಗುರುನಾಮ ೪

ಅಹಲ್ಯ ಉದ್ಧರಣ ಮಾಡಿದುದಿದೆ ನಾಮ
ಪ್ರಲ್ಹಾದನ ಪ್ರಾಣಗಾಯಿದಿದೆ ನಾಮ
ಫಲುಗುಣ ತಾ ಪಕ್ಷವಾದದುದಿದೆ ನಾಮ
ಒಲಿದು ಧ್ರುವಗಧಳವಿತ್ತ ಗುರುನಾಮ ೫

ಅಗಣಿತ ಗುಣ ಪರಿಪೂರ್ಣವಾದ ನಾಮ
ಸುಗಮ ಸುಪಥಸಾಧನ ಇದೆ ನಾಮ
ಯೋಜನ ಸೇವಿಸುವ ನಿಜನಾಮ
ನಿರ್ಗುಣಾನಂದವಾಗಿಪ್ಪ ಗುರುನಾಮ ೬

ಸೂರ್ಯಚಂದ್ರ ಸಮಸ್ತವಂದ್ಯ ಇದೆ ನಾಮ
ಕಾರ್ಯಕಾರಣವಾಗಿಪ್ಪ ವಿದೆ ನಾಮ
ತೂರ್ಯಾವಸ್ಥೆ ಯೊಳಗೆ ಸೂರಿಗೊಂಬು ನಾಮ
ತರಳಮಹಿಪತಿ ತಾರಕ ಗುರುನಾಮ ೭

## ೪೧೩

ಗುರು ನಿಮ್ಮ ಬಾಲಕ ನಾನು ನಮ್ಮ ಪಾಲಕ ನೀನು ಧ್ರುವ

ತಂದಿ ತಾಯಿ ಬಂಧು ಬಳಗವೆ ನೀನು
ಕಂದನಹುದೋ ನಿಮ್ಮ ನಾನು
ಎಂದೆಂದಿಗೆ ಒಂದಾಗಿಹ ನೀನು
ಸಂದಿಸ್ಯಾಡುವ ಮಗ ನಾನು ೧

ಬೇಡಿದ್ದು ಕೊಡುವೆ ಎನ್ನೊಡೆಯ ನೀನು
ಕಡೆಹುಟ್ಟಿದವ ನಾನು
ಬಿಡದೆ ಸಲಹುತಿಹ ಎನ್ನೊಡೆಯನೆ ನೀನು
ಪಿಡಿದಿಹೆ ಪಾದವ ನಾನು ೨

ಪತಿತ ಪಾವನನೆಂಬುದು ಖರೆ ನೀನು
ಅತಿ ದೀನನು ನಿಮ್ಮ ನಾನು
ಸಥೆಯ ನಡಿಸುವೆ ಮಹಿಪತಿಯ ನೀನು
ಹಿತ ಪಾತ್ರನು ನಿಮ್ಮ ನಾನು ೩

## ೪೧೪

ಗುರು ನಿಮ್ಮ ದಯವೆನಗಾನಂದೋದಯ
ಸರಿಸೌಖ್ಯಕರನೀವ ಮಹದಾಶ್ರಯ ಧ್ರುವ

ಗುರುನಿಮ್ಮ ಕೃಪೆನೋಟ ಎನಗನುಭವದೂಟ
ಸುರಸಯೋಗದ ಆಟ ಪರಮನೀಟ
ಗುರು ಸುಬೋಧದ ಕೂಡಿ ಎನಗೆ ನಿಜ ಘನ ಪ್ರಗಟ
ಕರಕಮಲ ಭಯದಮಾಟ ವರಮುಗುಟ ೧

ಗುರುನಿಮ್ಮ ದಯಕರುಣ ಎನಗೆ ಸಕಲಾಭರಣ
ವರ ಪ್ರತಾಪದೆ ವಿಜಯಾನಂದಘನ
ಗುರು ನಿಮ್ಮ ಶ್ರೀ ಚರಣ ಎನಗೆ ಬಳಗವು ಪೂರ್ಣ
ಹರುಷಗತಿ ಸಾಧನ ಪರಮಘನ ೨

ಗುರು ನಿಮ್ಮ ಬಲವೆ ಬಲ ಎನಗನುದಿನ ದೆಲ್ಯಚಲ
ಹೊರುಹುತಿಹ ನಾಮನಿಜ ಸರ್ವಕಾಲ
ತರಳ ಮಹಿಪತಿಗೆ ನೀಮಾಡುತಿಹ್ಯ ಪ್ರತಿಪಾಲ
ಗುರು ಭಾನುಕೋಟಿತೇಜನೆ ಕೃಪಾಲ ೩

## ೪೧೫

ಗುರುಪಾದಕೆ ಮನಮಗ್ನವಾಗುವದೆ ಖೂನ ಧ್ರುವ

ಗುರು ತನ್ನೊಳಗದೆ ಗುರ್ತು ನರದೇಹ್ಯದ ಭಾವನೆತಾಮರ್ತು
ಅರಿಯಲಿಕ್ಕೆ ಘನ ಬೆರ್ತು ಧರೆಯೊಳು ನಿಜನಿರ್ತ ೧

ಗುರುಶಿಷ್ಯತ್ವದ ನಿಜಖೂನ ಮರಜನಗಳಿದು ಬಲ್ಲವೇನ
ವಿರಳಾಗತ ವಿಷ್ಯದೀ ಜ್ಞಾನ ಸುರಜನ ಪಾವನ ೨

ಭಾವದೊಳ ನಿಜಗುರು ಸದ್ಭಕ್ತಿ ಠಾವಿಲಿರಬೇಕಿದು ಸಂಗತಿ
ಸೇವಿಸಿಕೊ ನಿಜ್ಜ ಮಹಿಪತಿ ಭವಹರ ಗುರುಮೂರ್ತಿ ೩

## ೪೧೬

ಗುರುಭಕುತಿಯಲಿ ಮನವಸ್ಥಿರವ ಗೊಳ್ಳಲಿಬೇಕು
ಅರತು ಸದ್ಭಾವದಲಿ ದೃಢಗೊಳ್ಳಬೇಕು ಧ್ರುವ

ನಿಶ್ಚಯವಿಡಬೇಕು ದುಶ್ಚಲವ ಬಿಡಬೇಕು
ನಿಶ್ಚಿಂತದಲಿ ನಿಜಸುಖ ಪಡೆಯಬೇಕು ೧

ನಂಬಿನಡಿಯಬೇಕು ಡಂಭಕವ ಬಿಡಬೇಕು
ಹಂಬಲಿಸಿ ಅಂಬುಜಾಕ್ಷನ ನೋಡಬೇಕು ೨

ವಿಶ್ವಾಸವಿಡಬೇಕು ವಿಷಗುಣವ ಬಿಡಬೇಕು
ವಿಶ್ವವ್ಯಾಪಕನ ವಿಶ್ವದಿ ನೋಡಬೇಕು ೩

ರತಿ ಪ್ರೇಮ ಬಿಡಬೇಕು ಅತಿ ಹರುಷ ಪಡಬೇಕು
ಸ್ತುತಿಸ್ತವನವನು ಪಾಡಿಗತಿ ಪಡೆಯಬೇಕು ೪

ಆರು ಜರಿಯಬೇಕು ಮೂರು ಹರಿಯಬೇಕು
ಅರಿತು ಗುರುಪಾದ ಮಹಿಪತಿಬೆರೆಯಬೇಕು ೫

## ೪೧೭

ಗುರುಭಕ್ತನೆ ಭಕ್ತ ಮೂರುಗುಣಕೆ ತಾ ವಿರಕ್ತ ಧ್ರುವ

ನಾದಬಿಂದು ಕಳೆಯು ಭೇದಿಸಿದವಗ್ಯಾತರ ಚಳಿಯು
ಆದಿತತ್ವದ ಕಳೆಯು ಎದುರಿಟ್ಟು ದಾವನ ಬಳೆಯು ೧

ಆಶಾಪಾಶಕೆ ಸಿಲ್ಕಿ ಮೋಸಹೋಗನು ಎಂದಿಗೆ ಹೋಕ
ವಾಸುದೇವನ ಸಖ ಭಾಸುತಿಹುದು ಆವಾಗನೇಕ ೨

ಅಲ್ಪನಲ್ಲವೆ ತಾನು ಕಲ್ಪತರು ಕಾಮಧೇನು
ಕಲ್ಪನೇಕರಹಿತನು ನಿಲುಕಡೆ ಕಂಡಿಹ್ಯ ನೆಲೆನಿಭನು ೩

ಮನ ಬಲದಿಹ ಯೋಗಿ ನಾ ನೀನೆಂಬುದು ನುಡಿಯಲಿ ತ್ಯಾಗಿ
ಸ್ವಾನುಭವದ ಭೋಗಿ ಜನನ ಮರಣ ಕಳೆದಿಹ ನೀಗಿ ೪

ಕುಡುವ ಅಮೃತ ಸ್ವಾದ ನೀಡುವ ಭಯ ನಿಜವಾದ
ಪಡೆಯೊ ಮಹಿಪತಿ ಬೋಧ ಕೊಡೊ
ಸದ್ಗುರು ಮೂರ್ತಿಯ ಪಾದ ೫

## ೪೧೮

ಗುರುಭಕ್ತಿ ಮನವೆ ನೀ ಮಾಡು ಸ್ಥಿರ
ಗುರುತಿಟ್ಟು ಬಾಹುದು ಪರಾತ್ಪರ
ಸರಿಗಾಣೆನೊ ಪುಣ್ಯಕೆ ನೋಡಿದರ
ಕರಕೊಂಬುದಿದೆ ಸುಖ ಸಜ್ಜನರ ೧

ಹಿಡಿಬೇಕು ಸದಾ ಗುರುಭಾವದೃಢ
ಕಡದ್ಹೋಗುದು ವಿದ್ಯಾ ಉಪಾಧಿ ಜಡ
ಪಡಕೊಂಬುದು ಮಾಡಬಾರದು ತಡ
ಒಡಲ ಹೊಕ್ಕರ ಸದ್ಗುರು ಕೈಯಬಿಡ ೨

ಗುರುನಾಮ ನಿಧಾನ ನೆನಿಯೊ ಸದ
ಸುರಲೋಕಕೆ ಪಾವನ ಮಾಡುವದ
ಪರತತ್ವಕೆ ಪಾರನೆದೋರುವದ
ಸ್ಮರಿಸಿನ್ನು ಮಹಿಪತಿ ಮುಖ್ಯವಿದ ೩

## ೪೧೯

ಗುರುಮಾರ್ಗ ಧನ್ಯಧನ್ಯವೆನ್ನಿ ಕರುಮುಗಿದು ಅನ್ನಿ ಧ್ರುವ

ಮರೆವ ಗರ್ವವ ಮುರಿವ ಹರಿವ ಮೂರೆರಡಂಕುರವ
ತೋರುವ ದೋರುವ ಯರ್ಥ ಪಜರುವ ಹೊಡೆವ
ಮರುವ್ವ ಅರುವ ಗುರುವಿನ ಕರುವ್ವ ಬೆರುವ ಪರಾತ್ಪರವ
ಇರುವ ಹರುಷದಿ ಸ್ಥಿರುವ ಕರೆವ ಸಾರಾಯ ಸುರೆವ ೧

ತೊಳೆವ ಮಾಯದ ಮಲದ ಕಳೆವ ಕಾಯ ಕಳವಳವ
ಅಳೆವ ಚಿತ್ತ ಚಂಚಲವ ಗಳುವ ಭಾವದುಶ್ಚಲವ
ಉಳುವ ಉಪಾಯಲಳಿವ ನಲುವ ನೋಡಿ ನಿಶ್ಚಲವ
ಬಲಿವ ಭಕ್ತಿ ಅಚಲವ ತಿಳುವ ಸದ್ವಸ್ತುದ ಹೊಳೆವ ೨

ಕೆಡುವ ಬುದ್ಧಿಯ ಬಿಡುವ ಕಡೆವ ಸಂದೇಹ ದೃಢವ
ನುಡಿವ ಶ್ರುತಿಯಂತೆ ನಡುವ ಜಡೆವ ಸದ್ಭಕ್ತಿವಿಡುವ
ಕುಡುವ ಗುರುವಿಗೆ ಮನ ಇಡುವ
ತುಡುವ ವೈರಾಗ್ಯನೆ ಮುಡುವ
ಹಿಡುವ ಮಹಿಪತಿ ನಿಜದೃಢವ ಕುಡುವ
ಸದ್ಗತಿ ಸದ್ಗುರುಗತಿಪಡೆವ ೩

## ೪೨೦

ಗುರುರಾಯಾ ಎನ್ನ ಪಾಲಿಸಯ್ಯಾ
ಕರುಣದಿ ಭವಾರ್ಣವದಿಂದಾ ದಾಟಿಸುವುದು ಜೀಯಾ ಪ

ಸೂಸಿದೆನೋ ನಾನಾ ಯೋನಿ ಮುಖದಿ ।
ಘಾಶಿಯಾದೆನೋ ವಿಷಯಾಭಿಲಾಷದಿ ।
ಸೋಸಿದೆನೋ ದು:ಖ ತಾಪವ ಮಾರದೀ ।
ಈಶ ನಿಮ್ಮ ಚರಣ ಸ್ಮರಣೆ ತೋರದೆ ಮಾಯಾ ಮೋಹದಿ ೧

ಧ್ಯಾನ ಮೌನವೆಂಬ ಸಾಧನವನು ।
ಈ ನಿಯಮ ಯಮ ಯೋಗವನು ।
ಜ್ಞಾನ ಭಕುತಿ ವೈರಾಗ್ಯವನು ।
ಏನು ಇಂತರಿಯದ ಮಹಾಪತಿತನು ।೨

ಮುನ್ನ ಮಾಡಿದೆಲ್ಲ ಪರಾಧ ಕ್ಷಮಿಸಿ ।
ಇನ್ನು ಅಭಯಕರ ಸಿರಸಲಿರಿಸಿ ।
ಎನ್ನ ಹೃದಯಾಲಂದಃ ಕಾರಹರಿಸಿ ।
ಸನ್ನುತ ಮಹಿಪತಿ ಎನ್ನ ಭಕ್ತನೆನಿಸಿ ೩

## ೪೨೧

ಗುರುವಿನ ದಯವಾಗಬೇಕು । ತನ್ನ ।
ಸದ್ಗತಿಗೆ ಅನ್ಯ ಸಾಧನ ಹೋಕು ಪ

ಕನ್ನಡಿಯ ಕಿಲುಬು ಹತ್ತಿ ಮುನ್ನ ।
ಮಾಸಿರಲು ಮತ್ತ । ದನ್ನೆ ।
ಜಾಣ ಬಂದು ಬೆಳಗಲಾಗಿರುಹು ।
ತನ್ನ ತೋರುವಂತೆ ನಿಜವಾಗಿ ।
ಮನಸ್ಸಿನ ಕದಡುಗಳಿಸುವನು ಯೋಗಿ ೧

ಸಾಧಿಸಿ ಬಯಲಗಂಬಾರನಲಿ ।
ಮುತ್ತುವಿದ್ದರೇನು ಯಜ್ಞವಾಗದಲ್ಲಿ ।
ಅದಕ ಸಾದು ಜೋಹರೆನೆವೆ ಬುದ್ಧಿಯಲ್ಲಿ ೨

ಗರಡಿಯಲಿಟ್ಟು ಹುಳವ ತನ್ನ ।
ಗುರುತು ತೋರುವುದು ಭೃಂಗೀ ।
ಅರಿಯದೇನು ಜನ ಗಾದಿಯಲ್ಲಾ ।
ಗುರು ಚರಣ ನಂಬದೆವೆ ಮುಕ್ತಿಯಿಲ್ಲಾ ।
ಇದ ಸಾರಿದನು ಮಹಿಪತಿ ಸೊಲ್ಲಾ ೩

## ೪೨೨

ಗುರುವಿನರಿಯದಾರಂಭ
ತೋರುವುದ್ಯಾತಕೆ ಡಂಭ
ಸುರಮುನಿಗಳಿಗಿದು ಗುಂಭ
ಗುರುಮಾರ್ಗವಾಗಿರಾಲಂಬ ೧

ಹೃದಯದೊಳಿರಲಜ್ಞಾನ
ತುದಿನಾಲಗಿಲ್ಯಾತಕ ಜ್ಞಾನ

ಇದು ನಿಜ ಮೋಹಿಸು ಖೂನ
ಸಾಧಿಸುದಲ್ಲ ನಿಧಾನ ೨

ಅಳಿಯದೆ ಕಾಮಕ್ರೋಧ
ಹೊಳುವದ್ಯಾತಕೆ ಬೋಧ
ತಿಳಿಯದೆ ಶ್ರೀಗುರುಪಾದ
ಬೆಳಿಸುವದ್ಯಾತಕೆ ವಿವಾದ ೩

ತತ್ವನರಿಯದ ಕವಿತ್ವ
ಯಾತಕಿದು ಅಹಮತ್ವ
ಸತ್ವದೊಳಾಗದೆ ಕವಿತ್ವ
ಮಿಥ್ಯವಿದ್ಯಾತಕೆ ಮಹತ್ವ ೪

ಆಶಿಯನಳಿದರೆ ಸಾಕು
ವೇಷದೋರುದ್ಯಾತಕೆ ಬೇಕು
ಹಸನಾದರ ರಸಬೇಕು
ಭಾಸುದು ಮಹಿಪತಿ ಘನಘೋಕು ೫

## ೪೨೩

ಗುರುವಿನರಿಯದೆ ಮರುಳಲೋಕ ಒಂದೊಂದು ಪರಿ
ಗುರುಮಾಡಿಕೊಂಡುದರ ಹೊರವುತಿದೆ
ಧರೆಯೊಳು ಬರಿದೆ ಭ್ರಮೆಗೊಂಡಿಹ್ಯದು
ಪರಗತಿಯ ಜರೆದು ಶ್ರೀ ಗುರುಪಾದವನ್ನರಿಯದೆ ೧

ಸತ್ವಧಾತುದ ನೆಲೆಯು ತತ್ವ ಮೋಹಲಾದನು
ಮತ್ತೈದು ಮುದ್ರೆಗಳ ವ್ಯಾಪಿಸಿಹ ಪ್ರಾಣವನು

ಚಿತ್ತ ಮನಬುದ್ಧಿ ಅಂತಃಕರಣ ಮುಟ್ಟಿ
ಮುದ್ರಿಸಿದಾತ ಪರಮಗುರುವು ೨

ಸತ್ವ ರಜ ತಮವು ಮೊದಲಾದ ಗು–
ಣತ್ವಗಳು ಪಂಚಭೂತಾತ್ಮದ
ವಸ್ತಿ ವಿವರಣಗಳು ವಿಸ್ತಾರಗತಿಗಳನು
ವಿಸ್ತರಿಸಿ ತೋರಿಸಿದಾತ ಸಾಕ್ಷಾತ ಗುರುವು ೩

ಸ್ವಪ್ನ ಸುಷುಪ್ತಿ ಜಾಗ್ರತಿ ತ್ರಯವಸ್ಥಿತಿಗಳು
ಪ್ರಾಣಪ್ರಣಮ್ಯ ಪ್ರವೃತ್ತಿ ನಿವೃತ್ತಿಗಳು
ಶಕ್ತಿ ಉನ್ಮನಿಯ ಉದ್ಭವ ಗತಿಯು
ತೋರಿಸಿದಾತ ಸಾಕ್ಷಾತ ಗುರುವು ೪

ಹತ್ತು ಮತ್ತೆರಡು ಧ್ವನಿ ವತ್ತಿಗ್ಹೇಳೆನಿಸುವದ
ರತ್ನ ಮೂರರ ಪ್ರಭೆಯ ದಾಟಿ ಸಂಜೀವನಿಯ
ಸತ್ರಾವಿ ಜೀವನ ಕಳಾ
ಮೃತವದೋರಿಸಿದಾತ ಸಾಕ್ಷಾತ ಗುರುವು ೫

ಒತ್ತಿ ಆಧಾರ ಬಲದೆತ್ತಿ ಕುಂಡಲಣಿಯ
ಕೆತ್ತಿ ಸರ್ಪೆತ್ತಿ ಮುಖ ಮಾಡಿ ಊರ್ಧ್ವ
ಗತಿಯು ಮತ್ತೆ ಷಡಚಕ್ರಗಳ
ಗತಿಗಳನು ದೋರಿದಾತ ಸಾಕ್ಷಾತ ಗುರುವು ೬

ಪತಿತ ಮಹಿಪತಿಯ ಪಾವನ್ನಗೈಸುತ್ತಮದಿ
ಉತ್ಪತ್ತಿ ಸ್ಥಿತಿ ಲಯವು ತಾರಿಸಿ ಸ–
ದ್ಗತಿಯು ನಿತ್ತಿಹ್ಯಾನಂದ ಘನ ಸತ್ಯ ಸದ್ಗುರು
ಮೂರ್ತಿ ಸಾಕ್ಷಾತ ಪರಮಗುರುವು ।೭

## ೪೨೪

ಗುರುವೆಂದರವಗೆ ಪರಮಸುಖ
ಹರೆದು ಹೋಗುವುದು ಭವಾರ್ಣವ ದುಃಖ ಧ್ರುವ

ಗುರು ಎಂದ್ಹಾಂಗ ಬಾಯಿಲಿ
ಅರಿಯಬೇಕು ಮನದಲಿ
ದೋರುವದಾನಂದ ಲೀಲಿ
ಗುರು ಕೃಪೆಯಲಿ ೧

ಅರ್ತರೊಂದೆ ಸಾಕು ಪೂರ್ಣ
ಕರ್ತು ಸದ್ಗುರು ಚರಣ
ಮರ್ತ್ಯದೊಳಿದೆ ನಿಧಾನ
ಸಾರ್ಥಕಗುಣ ೨

ನರನೆಂದು ಮರೆದೀಗ
ಗುರು ನಿಜಾಗುವ ಬ್ಯಾಗ
ಸೆರಗು ಮಹಿಪತಿಗೆ
ದೋರಿತು ಈಗ ೩

## ೪೨೫

ಗುರು ಸದ್ಗುರು ಆರೆಂದು ನೋಡೊ
ಗುರುತಿಟ್ಟು ಮನವೆ ಸೇವೆ ಮಾಡೊ ಧ್ರುವ

ಗುರುಗಳುಂಟು ಮನೆಮನೆ ಬಹಳ
ಬ್ಯಾರೆ ಬ್ಯಾರೆ ಮಾಡುತ ತಮ್ಮ ಮ್ಯಾಳ
ದೋರುತಿಹರು ಮೋಹಿಸುವ ವಾಗ್ಜಾಲ
ಸರಿ ತಮಗಾರಿಲ್ಲೆಂದೆನ್ನು ತಲಾ ತೋಳ ೧

ಎಲ್ಲ ಬಲ್ಲತನದಭಿಮಾನ
ಅಲ್ಲೆ ಕೊಂಬುದೇನುಪದೇಶ ಜ್ಞಾನ
ಸೊಲ್ಲಿಲ್ಲೇಳಿ ಕೇಳಿದರಾಹುದೇನ
ಸಲ್ಲದರಲಿಹುದೆನೊಡೆತನ ೨

ಸರ್ವಸಮ್ಮತಾಗುವ ಸುಜ್ಞಾನ
ಗರ್ವಾಭಿಮಾನಗೆಲ್ಲಿಹುದು ಖೂನ
ಪೂರ್ವಾಪರ ಸದ್ಗುರು ನಿಜಧ್ಯಾನ
ದೋರ್ವದು ತಾಂ ಪಡೆದವಗ ಪೂರ್ಣ ೩

ವಿರಳಾಗತ ಎಲ್ಲಿಗೊಬ್ಬ ಮಹಿಮ
ಶರಣ ಹೊಕ್ಕವಗೆ ಪೂಜ್ಯಪರಮ
ಕರತಳಾಮಲಕವಾಗುವ ನಿಜವರ್ಮ
ಗುರುಮಾರ್ಗದಾಗೆನಬೇಕು ನೇಮ ೪

ಗುರುವರ ಶಿರೋಮಣಿ ಭಾನುಕೋಟಿ
ಗುರುತಾದ್ಯೆನ್ನ ಮನದೊಳು ನಾಟಿ
ಪರಬ್ರಹ್ಮನಹುದೊ ಜಗಜೇಟಿ
ತರಳ ಮಹಿಪತಿ ಮನವಸೋಘಾಟಿ(?) ೫

## ೪೨೬

ಗುರು ಸ್ವರೂಪದರಹು ಗುರುತದೋರುವ ಕುರುಹು
ಗುರುವ್ವೆ ಇರುವ್ವಾಂಗ ದೋರುದೆ ಪರಾತ್ಪರವು ಧ್ರುವ

ಅರವಿನಾಗ್ರದಲಿಹ ಕುರುಹುದೋರುವ ಖೂನ
ಗುರುತವಾಗುದೆ ಗುರುಕೃಪೆಯ ಜ್ಞಾನ
ಮರವಿನ ಮೂಲವನು ಮರೆದು ಬಿಡುವಸ್ಥಾನ
ಅರವೆ ಅರವಾಗಿದೋರುವ ನಿಜ ನಿಧಾನ ೧

ಅರಹು ಮರವನೆ ದಾಟಿ ಮೀರಿ ದೋರುವ ಕುರುಹು
ಅರಿತು ಕೊಂಬುದೆ ತತ್ವದರವ್ಹಿನರಹು
ತಿರುಹು ಮುರುವ್ಹಿನ ಅರುಹದೋರಿ ಕೊಡುವುದೇ ಸ್ಥಿರವು
ಬೆರೆದು ಕೊಡುವದೆ ಗುರುಜ್ಞಾನಾನಂದ ಕುರುಹು ೨

ಕರೆದು ಕರುಣಿಸಿ ದಯವು ಬೀರಿದನುಭವ ಸುಖವು
ಗುರುಭಾನುಕೋಟಿ ಪ್ರಕಾಶ ಎನಗೆ
ಅರವೆ ಅರಿವ್ಹಾಗಿ ತೋರಿತು ಮನೋನ್ಮನವಾಗಿ
ತರಳ ಮಹಿಪತಿಗೆ ಘನ ಬೆಳಗೆ ಬೆಳಕು ೩

## ೪೨೭

ಘನಗುರು ನೀನೇವೆ ಘನಗುರು ನೀನೇವೆ
ಅನುಭವ ಸ್ವಸಿದ್ಧವೊ
ಅನುದಿನ ಶ್ರುತಿ ಖೂನ ಹೇಳುವ ಜ್ಞಾನವು ಧ್ರುವ

ಗುಣಗುಣಕ್ಕೆ ಅಣುರೇಣು ವ್ಯಾಪಕ್ಕೆ
ಜನವನ ಸ್ಥಾನ ಸುಸ್ಥಾನಕ್ಕೆ
ಮನೋನ್ಮನಕ್ಕೆ ಜ್ಞಾನ ವಿಜ್ಞಾನಕ್ಕೆ
ತಾನೆ ತಾನಾಗಿಹ್ಯದಕ್ಕೆ ೧

ಅಖಿಳ ಭುವನಕ್ಕೆ ಸನ್ಮತಕ್ಕೆ
ಪ್ರಕಟಗುಚಿತ ಪ್ರತ್ಯಕ್ಷಕ್ಕೆ
ಶುಕಾದಿ ಮುನಿಗಳ ಮುಗುಟಮಣಿಯಾಗುದಕ್ಕೆ
ಭಕ್ತವತ್ಸಲಾಗಿಹುದಕ್ಕೆ ೨

ಇಹಪರ ಸಾಧನಕ್ಕೆ
ಬಾಹ್ಯಾಂತರ ದೊರೆವುದಕ್ಕೆ
ಸಾಹ್ಯಮಾಡುವ ಸಹಕಾರಕ್ಕೆ ಮಹಿಪತ್ಯುದ್ದೇಶಕ್ಕೆ
ಸ್ವಹಿತ ಸುಪಥಕೆ ಶ್ರೇಯ ಸುಖದೋರುವಾಶ್ರಯಕ್ಕೆ ೩

## ೪೨೮

ಘನ ಗುರು ನೀನೆನ್ನೋ ಎನಗೆ ಸಾಕ್ಷಾತವೋ
ಮನಕಾದನಕೂಲವೋ ಧ್ರುವ

ಕಣ್ಣಿಲೆ ಕಂಡೆವೋ ಚನ್ನಾಗ್ಗಿಡಿದೆವೋ
ಇನ್ನೆಲ್ಲಿಗ್ಹೋದೆಲವೋ ಮುನ್ನಿನ ಪುಣ್ಯವೋ
ನಿನ್ನ ನೋಡಿದೆವೋ ಧನ್ಯ ಧನ್ಯವಾದೆವೋ ೧

ಸಾಧಿಸಿ ಬಿಡೆವೋ ಭೇದನ ಮಾಡೆವೋ
ಸದಮಲ ಸುಖಗೂಡುವೆವೋ ಸಾಧನ ಮಾಡುವೆವೋ
ಭೇದಿಸಿ ನೋಡುವೆವೋ ಸದೋದಿತ ಬೆರದಾಡುವೆವೋ ೨

ಗುಹ್ಯ ಗುರುತವೋ ಧ್ಯಾನಿಸುವೆವೋ
ದಯಮಾಡಬೇಕೆಲವೋ ಇಹಪರ ನೀನೆವೋ
ಮಹಿಪತಿ ನಿಜವೋ ತಾಯಿತಂದೆ ನೀನೆವೋ ೩

## ೪೨೯

ಜಾಗಿಸಬೇಕು ಜಗದ್ಗುರುವಿನ ಕೃಪೆಯಿಂದ ಧ್ರುವ

ಜಾಗಿಸದಲ್ಲದೆ ಖೂನ ಸುಗಮ ಸುಪಥದೋರದು ನಿಧಾನ
ಯೋಗಿಜನರ ನಿಜಧನ ಆಗುದು ಸ್ವಾಧೀನ ೧

ಜಾಗಿಸಿ ನೋಡಲು ಸ್ವಸುಖ ಬಗೆಬಗೆದೋರುತದೆ ಅನೇಕ
ಅಗಣಿತಗಮ್ಯಾಲೋಲಿತ ಶ್ರೀಗುರು ಕೌತುಕ ೨

ಝುಗಿಝುಗಿಸುವ ಜಗಜ್ಯೋತಿ ಜಾಗಿಸಿದ ಶ್ರೀ ಸದ್ಗುರುಮೂರ್ತಿ
ಸಾಗಿ ಭವನಿದ್ರೆಯವಾರ್ತಿ ನೀಗಿದ ಮಹಿಪತಿ ೩

## ೪೩೦

ಜ್ಞಾನದ ಬಲು ಹುಚ್ಚು ಘನ ಗುರು
ದಯದೊಲವಿನ ಮೆಚ್ಚು ಧ್ರುವ

ಮಾಡದ ಮಾಡಿಸಿತು ನೋಡಿದರೇನ ತಾಂ ನೋಡಿಸಿತು
ಕೂಡದ ಕೂಡಿಸಿತು ಬಿಡದಾಗಿಹ್ಯದ ಬಿಡಿಸಿತು ೧

ತನ್ನ ತಾನರಸಿತು ಇನ್ನೊಂದರನೆ ಮರೆಸಿತು
ಭಿನ್ನ ಭೇದ್ಹರಿಸಿತು ಚಿನ್ಮಯದ ಸುಖ ಬೆರೆಸಿತು ೨

ಕಾಣದ ಕಾಣಿಸಿತು ಉಣದೂಟನೆ ತಾ ಉಣಿಸಿತು
ಅನುಮಾನಗಳಿಸಿತು ಘನ ಮಹಿಪತಿಗೆ ನುಡಿಸಿತು ೩

## ೪೩೧

ಜೀವ ನಿಮ್ಮದೊ ಗುರು ಭಾವ ನಿಮ್ಮದೊ
ಜೀವ ಭಾವದ ಶಿವಸೂತ್ರ ನಿಮ್ಮದೊ ಧ್ರುವ

ಕಾಯ ಮಾಯ ನಿಮ್ಮದು ಅಂತ್ರ ಬಾಹ್ಯ ನಿಮ್ಮದು
ನಿರ್ಮಿಸಿಹ್ಯ ಇದು ಉಪಾಯ ನಿಮ್ಮದು ೧

ಪೃಥ್ವಿ ಅಪ್ಪು ನಿಮ್ಮದು ತೇಜ ತತ್ವ ನಿಮ್ಮದು
ವಾಯುವಾಕಾಶವೆ ತಾ ತತ್ತ್ವನಿಮ್ಮದು ೨

ಪ್ರಾಣವೇ ನಿಮ್ಮದು ಪಾನವೇ ನಿಮ್ಮದು
ವ್ಯಾನ ಉದಾನ ಸಮಾನ ನಿಮ್ಮದು ೩

ಅಂತಃಕರಣ ನಿಮ್ಮದು ಬುದ್ಧಿಮನ ನಿಮ್ಮದು
ಚಿತ್ತ ಚೈತನ್ಯ ಚೇತನ ನಿಮ್ಮದು ೪

ನುಡಿನೋಟ ನಿಮ್ಮದು ಆಟಕೂಟ ನಿಮ್ಮದು
ಕರ್ನ ಕೇಳಿಕೆಯಾಟವು ನಿಮ್ಮದು ೫

ಸ್ಥೂಲ ಸೂಕ್ಷ್ಮ ನಿಮ್ಮದು ಕಾರಣವು ನಿಮ್ಮದು
ಮಹಾ ಕಾರಣವು ಆನಂದ ನಿಮ್ಮದು ೬

ಜಾಗ್ರತೆ ನಿಮ್ಮದು ಶೀಘ್ರತಿ ನಿಮ್ಮದು
ಪ್ರವೃತ್ತಿನಿವೃತ್ತಿ ಸುವ್ಯಕ್ತಿ ನಿಮ್ಮದು ೭

ಸ್ವಪ್ನಾವಸ್ಥೆ ನಿಮ್ಮದು ಸುಷಪ್ತಿ ನಿಮ್ಮದು
ಸರ್ವಾವಸ್ಥೆಗಳ ಲಕ್ಷಣ ನಿಮ್ಮದು ೮

ಅರಹು ಮರಹು ನಿಮ್ಮದು ಖೂನ ಕುರಹು ನಿಮ್ಮದು
ತಿರವು ಮುರವಿನಮಲ ಸೂತ್ರ ನಿಮ್ಮದು ೯

ಇಹಪರ ನಿಮ್ಮದು ಸಾಹ್ಯ ಸರ್ವ ನಿಮ್ಮದು
ಗುಹ್ಯ ಗುರುತ ದೋರುವ ಸೋಹ್ಯ ನಿಮ್ಮದು ೧೦

ಮಹಿಪತಿ ಜೀವ ನಿರ್ಮಿತ ಜ್ಞಾತಿ ನಿಮ್ಮದು
ಸದ್ಗತಿಗೈಸುವ ಖ್ಯಾತಿ ನಿಮ್ಮದು ೧೧

## ೪೩೨

ತಾರಕುಪದೇಶವೆಂಬ ಸಾರಣಿಯ ಕೊಟ್ಟು
ಪೂರ್ವ ಕರ್ಮಗಳೆಂಬ ಕಿಲ್ಮಿಷಗಳ ತೊಳೆದು ಧ್ರುವ

ನಿಜ ಬೋಧವೆಂಬ ಚೂರ್ಣ ಕೊಟ್ಟು
ಭವಬೀಜವೆಂಬ ವ್ಯಾದಿಯ ಮೂಲನೆ ಸುಟ್ಟು
ಜ್ಞಾನಾಮೃತವೆಂಬ ಕಷಾಯದಲಿ
ಉತ್ಪತ್ತಿ ಸ್ಥಿತಿ ಲಯವೆಂಬ ತ್ರಿದೋಷವನು ಪರಿಹರಿಸಿದ
ನಮ್ಮ ಗುರು ಭವರೋಗವೈದ್ಯ ೧

ಕಾಯವೆ ಕೋವಿಯನೆ ಮಾಡಿ ಭಾವನೆಯ ಮದ್ದನೆ ತುಂಬಿ
ಸೋಹ್ಯ ಸೊನ್ನೆಯ ರಂಜನಸಿಕ್ಕಿ
ಲಯಲಕ್ಷವೆಂಬ ಗುಂಡಿನಲಿ
ಭವಪಾಶವೆಂಬ ಗುರಿಯ ಕೆಡಹಿದ
ನಮ್ಮ ಗುರುನಾಥ ಮಹಿಪತಿಯ ೨

## ೪೩೩

ತ್ರಾಹಿ ತ್ರಾಹಿ ಎನ್ನಿರೊ ತ್ರೈಲೋಕ್ಯದೊಡಿಯಗೆ
ತ್ರಾಹಿ ತ್ರಾಹಿ ಎನ್ನಿರೊ ತಾರಕ ಬ್ರಹ್ಮಗೆ ಧ್ರುವ

ಕಾಮ ಕ್ರೋಧ ಸುಟ್ಟು ಹೋಳಿಯಾಡುವ ಬನ್ನಿರೊ
ಪ್ರೇಮ ಪ್ರೀತಿಯಿಂದ ಕುಣಿದಾಡುವ ಬನ್ನಿರೊ ೧

ಭೇದವಳಿದು ಸಾಧು ಜನರ ಕೂಡಿಕೊಂಬ ಬನ್ನಿರೊ
ಮದ ಮತ್ಸರವ ಬೂದಿ ಮಾಡಿಚೆಲ್ಲುವ ಬನ್ನಿರೊ ೨

ಏಕರಂಗವಾಗಿ ಓಕುಳ್ಯಾಡವ ಬನ್ನಿರೊ
ಜೀಕಳಿಯ ಮಾಡಿ ಮಾಯ ಮೋಹ ಎಸುವ ಬನ್ನಿರೊ ೩

ಎಲ್ಲರೊಳಗಿಹ ನಮ್ಮ ಪುಲ್ಲನಾಭ ಚಲುವನೊ
ಬಲ್ಲ ಮಹಿಮನಿಗೆ ನೆಲೆಯ ನೋಡಿ ಒಲಿವನೊ ೪

ಹೋಳಿಯಾಡಿದನು ನೋಡಿ ಇಳಿಯೊಳಗ ಮಹಿಪತಿಯು
ಕಳೆದು ಕಲ್ಪನೆ ಕೋಟಲಿಂದ ಗೆದ್ದ ನೋಡಿರೊ ೫

## ೪೩೪

ತ್ರಾಹಿ ತ್ರಾಹಿ ಗುರುನಾಥ ಎಂದು
ತ್ರಾಹಿ ದೀನನಾಥ ಎಂದು
ಸಾಹ್ಯ ಮಾಡಿಕೊಳ್ಳಿ ಬಂದು
ಸೋಹ್ಯದೋರುವ ದೀನಬಂಧು ಧ್ರುವ

ವ್ಯರ್ಥಗಳಿಯಬ್ಯಾಡಿ ಜನ್ಮ
ಗುರ್ತು ಮಾಡಿಕೊಳ್ಳಿ ನಿಮ್ಮ
ಸಾರ್ಥಕಿದೆ ಸಂತ ಧರ್ಮ
ಅರ್ತುಕೊಳ್ಳಾನಂದೊ ಬ್ರಹ್ಮ ೧

ಸಾರಿ ಚೆಲ್ಯದ ಹರಿರೂಪ
ದೋರುವ ಗರುಕುಲದೀಪ
ದೋರುತಿಹ್ಯದು ಚಿತ್‌ಸ್ವರೂಪ
ಸೂರ್‍ಯಾಡಬಹುದು ಸ್ವಸ್ವರೂಪ ೨

ಸ್ವಾರ್ಥ ಅತಿಹಿಡಿಯಬ್ಯಾಡಿ
ಮರ್ತ್ಯದೊಳು ಮರ್ತುಬಿಡಿ
ಕರ್ತು ಸ್ವಾಮಿಯ ಅರ್ತು ಕೂಡಿ
ಬೆರ್ತು ನಿಮ್ಮೊಳು ನಿರ್ತ ನೋಡಿ ೩

ಏನು ಹೇಳಲಿ ಹರಿಯ ಸುಖ
ಖೂನದೋರುದು ಸಂತ ಮುಖ
ಜ್ಞಾನಿ ಬಲ್ಲೀ ಕೌತುಕ
ಧನ್ಯವಾಯಿತು ಮೂರುಲೋಕ ೪

ಹಿಡಿದು ನಿಜ ಒಂದು ಪಥ
ಪಡೆದ ಮಹಿಪತಿ ಹಿತ
ಒಡೆಯನಹುದಯ್ಯ ಈತ
ಕುಡುವ ಭುಕ್ತಿ ಮುಕ್ತಿದಾತ ೫

## ೪೩೫

ತ್ರಾಹಿ ತ್ರಾಹಿ ತ್ರಾಹಿ ಎನ್ನಬೇಕು ಧ್ರುವ

ಕಡ್ಡಿಮರೆಯಲ್ಯದ ನೋಡಿರೊ ಗುಡ್ಡ
ಗುಡ್ಡಕಾಣಲರಿಯದವನ ಹೆಡ್ಡ
ಹೆಡ್ಡನಾದರ ವಸ್ತುಕಾಗೇದಡ್ಡ
ಅಡ್ಡಾಗಡ್ಡೇರಿಸಿದ ಶ್ರೀಗುರುದೊಡ್ಡ ೧

ಅಡ್ಡಾಗಡ್ಡೆಂಬುಕ ಅನುಮಾನ
ಗುಡ್ಡವೆಂಬುವೆ ವಸ್ತು ತಾ ನಿಧಾನ
ವಡ್ಡಗೊಂಡಿಹುದು ಕಾಣದ ಮನ
ಅಡ್ಡಮರಿ ಬಿಡಿಸುವ ಗುರುಜ್ಞಾನ ೨

ಕಡ್ಡಿಮರೆಯು ಆಗಿಹ್ಯ ತಾ ಕಾರಣ
ಅಡ್ಡ ಬಿದ್ದೆನಯ್ಯ ಗುರುವಿಗೆ ಶರಣ
ದೊಡ್ಡ ಸ್ವಾಮಿ ನಮ್ಮ ಸದ್ಗುರು ಕರುಣ
ವಡ್ಡುಗಳಿಸಿದ ಮಹಿಪತಿಗೆ ಪೂರ್ಣ ೩

## ೪೩೬

ತ್ರಾಹಿ ತ್ರಾಹಿ ತ್ರಾಹಿ ಎನ್ನಿ ಇದೇವೆ ಕೈವಲ್ಯ ಇದೇವೆ ದೇವಾಲ್ಯ
ತ್ರಾಹಿ ತ್ರಾಹಿ ತ್ರಾಹಿ ಎಂದು ನೋಡಿಮನದ ವೈಶಾಲ್ಯ ಧ್ರುವ

ಮಹಾಮಹಿಮೆ ದೋರುವ ಇದೆ ದೇವದ್ವಾರ
ಸೋಹ್ಯದೋರಿ ಕುಡುತಿಹ ಪುಣ್ಯ ಸಹಕಾರ
ಬಾಹ್ಯಾಂತ್ರ ಭಾಸುತಿಹ ಸದ್ಗುರು ಸಹಕಾರ
ದೇಹ ಅಭಿಮಾನ ಬಿಟ್ಟು ಮಾಡಿ ಜಯ ಜಯಕಾರ ೧

ಮಾರ್ಗ ಸುಪಥವಿದೆ ನೋಡಿ ಸಾಕ್ಷಾತ್ಕಾರ
ವರ್ಗ ಷಡ್ವೈರಿಗಳ ಮಾಡಿ ಬ್ಯಾಗೆ ದೂರ
ದೀರ್ಘದಂಡ ಹಾಕಿ ಗುರುವಿಗೆ ನಮಸ್ಕಾರ
ಸ್ವರ್ಗ ಸುಖಗೊಳ್ಳಲಿಕೆ ಇದೇವೆ ಸಹಕಾರ ೨

ಸ್ವರ್ಗ ಭೂಕೈಲಾಸ ವೈಕುಂಠವಿದೆ ನೋಡೆವ್ವೆ
ಮಗ್ನವಾಗಿ ಮಹಾಗುರು ಪಾದ ಪದ್ಮಕೂಡಿ
ಯೋಗ ಇದೆ ಸುಗಮ ಸಾಧನವ ಮಾಡಿ
ಸುಜ್ಞಾನ ಸೂರೆಗೊಂಡು ಮಹಿಪತಿ ನಿಜಗೂಡಿ ೩

## ೪೩೭

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿಯೆನ್ನಿರೊ
ತ್ರಾಹಿ ತಾರಕ ಬ್ರಹ್ಮಗೆನ್ನಿರೊ ಧ್ರುವ

ತ್ರಾಹಿ ಮಚ್ಛ ಕೂರ್ಮಾವತಾರಗೆನ್ನಿರೊ
ತ್ರಾಹಿ ವರಹ ನರಸಿಂಹಗೆನ್ನಿರೊ
ತ್ರಾಹಿ ವಾಮನ ಭಾರ್ಗವಗೆನ್ನಿರೊ
ತ್ರಾಹಿ ರಾಮಕೃಷ್ಣ ಗೋಪಾಲಗೆನ್ನಿರೊ ೧

ತ್ರಾಹಿ ಭೌದ್ಧ ಕಲ್ಕ್ಯಾವತಾರಗೆನ್ನಿರೊ
ತ್ರಾಹಿ ಸಗುಣ ನಿರ್ಗುಣಗೆನ್ನಿರೊ
ತ್ರಾಹಿ ವಟಪತ್ರಶಯನಗೆನ್ನಿರೊ
ತ್ರಾಹಿ ತ್ರೈಲೋಕ್ಯ ವಂದಿತಗೆನ್ನಿರೊ ೨

ತ್ರಾಹಿ ಹರಿಹರ ವಿರಂಚಿಗೆನ್ನಿರೊ
ತ್ರಾಹಿ ಸುರವರ ನಿರಂಜನಗೆನ್ನಿರೊ
ತ್ರಾಹಿ ಭಕ್ತಜನ ಸಹಕಾರಗೆನ್ನಿರೊ
ತ್ರಾಹಿ ಮಹಿಪತಿ ಪಾಲಗೆನ್ನಿರೊ ೩

## ೪೩೮

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಗುರುನಾಥ
ತ್ರಾಹಿ ತಾರಕಬ್ರಹ್ಮ ಸಾಯೋಜ್ಯತ
ತ್ರಾಹಿ ಅನಾಥ ಬಂಧು ಸಾಕ್ಷಾತ
ತ್ರಾಹಿ ದೀನಾನಾಥ ತ್ರಾಹಿ ತ್ರಾಹಿ ೧

ಮಾಡಲರಿಯೆ ನಾನಿಮ್ಮ ನಿಜಸ್ತುತಿ
ಹಿಡಿಯಲರಿಯೆ ದೃಢ ಸದ್ಭಕ್ತಿ
ಪೊಡವಿಯೊಳು ನಾ ಮೂಢಮಂದಮತಿ
ಕೂಡಿಕೊಂಬೊ ದಯಮಾಡೋ ಶ್ರೀಪತಿ ೨

ಮೊದಲಿಗಾಡುವ ಬಾಲಕವೃತ್ತಿ
ತೊದಲುನುಡಿ ತಾಯಿಗತಿ ಪ್ರೀತಿ
ಇದೆ ಪರಿಯಲೊಪ್ಪಿಸಿಕೊಂಬ ಸ್ತುತಿ
ಮೇದಿನಿಯೊಳು ನಿಮ್ಮ ಖ್ಯಾತಿ ೩

ಆಡಿಸಿದಂತೆ ಆಡುವೆ ನಾ ನುಡಿ
ನಡೆಸಿಕೊಂಬುದು ಸನ್ಮತ ಮಾಡಿ

ಕೊಡುವಂತೆ ಮಾನ್ಯ ಸಂತರೊಡಗುಡಿ
ಮಾಡೊ ದಯ ನಿಮ್ಮಭಯನೀಡಿ 	೪

ತ್ರಾಹಿ ತ್ರಾಹಿಯೆಂಬೆ ತನು ಮನರ್ಪಿಸಿ
ತ್ರಾಹಿಯೆಂಬೆ ಶಿರಸಾಷ್ಟಾಂಗ ನಮಿಸಿ
ತ್ರಾಹಿಯೆಂಬೆ ಮನದೊಳು ಸ್ಮರಿಸಿ
ಕಾಯೊ ಮಹಿಪತಿಯ ಕರುಣಿಸಿ 	೫

## ೪೩೬

ತ್ರಾಹಿ ತ್ರಾಹಿ ತ್ರಾಹಿ ಎನ್ನಿ ಕೈಯ ಮುಗಿದೊಮ್ಮೆ । ಕೈ ...
ತ್ರಾಹಿ ತ್ರಾಹಿ ತ್ರಾಹಿ ಎನ್ನಿ ಮನದಲಿನ್ನೊಮ್ಮೆ 	ಧ್ರುವ

ಪುಣ್ಯಕ್ಷೇತ್ರವಹುದಿದು ಸಾರವಾಡಗ್ರಾಮ । ಸಾ...
ಕಣ್ಣಾರೆ ಕಂಡು ಯಾತ್ರೆಗೆ ಬಾಹುದು ಬ್ರಹ್ಮಸ್ತೋಮ । ಬಾ...
ಸಣ್ಣ ದೊಡ್ಡವರಿಗೆಲ್ಲ ಭಾಸುದು ಸಂಭ್ರಮ । ಭಾ...
ದಣಿವು ಹಿಂಗಿ ದೋರುತಿಹುದು ಆನಂದೊಬ್ರಹ್ಮ 	೧

ಧರೆಯೊಳಧಿಕವಾದ ಕ್ಷೇತ್ರವಿದೆ ಕಾಶಿ । ಕ್ಷೇ...
ಹರಿಯುತಿಹುದು ನೋಡಿ ಜ್ಞಾನ ಗಂಗೆಯು ಸೂಸಿ । ಜ್ಞಾ...
ಸ್ಮರಣೆಯಿಂದ ಹರಿ ಸೇವ್ಯಾಹುದು ಪಾಪದರಾಶಿ । ಪಾ...
ಗುರು ವಿಶ್ವೇಶ್ವರ ತಾರಿಸುತಿಹ ಕರುಣಿಸಿ 	೨

ಸರ್ವ ತೀರ್ಥ ಮಿಂದ ಫಲ ಬಾಹುದಿಲ್ಲೆ ನೋಡಿ । ಬಾ...
ಪೂರ್ವ ಕರ್ಮಾದಿಗಳೆಲ್ಲ ಹೋದವಿಲ್ಲೆ ನೋಡಿ । ಹೋ...
ಸರ್ವರು ಅರಿತು ನೀವು ಇದೆ ಯಾತ್ರೆಯ ಮಾಡಿ । ಇ...
ನಿರ್ವಾಣ ಪರ್ವಣೀಯ ಫಲ ಬಾಹುದು ಕೈಗೂಡಿ 	೩

ಪುಣ್ಯಗೈದ ವಿಶ್ವನಾಥ ಸತಿಸಹಗೂಡಿ । ಸ...
ಜನುಮಾಂತ್ರದ ದೋಷಗಳದಿಲ್ಲೆ ನೋಡಿ । ಗ...
ಘನ ಸುಖ ಪಡೆದುನುಮಾನ ಈಡ್ಯಾಡಿ । ಈ...
ವರ್ಣಿಸಲಾಗುದು ಸ್ತುತಿ ಸ್ತವನ ಪಾಡಿ ೪

ಮನವಿಟ್ಟು ಕೇಳಿ ಸ್ತುತಿ ಭಾವ ಭಕ್ತಿಯಿಂದ । ಭಾ...
ಪುಣ್ಯಗೈತೆನ್ನ ಜೀವ ಅನುಭವದಿಂದ । ಅ...
ಉನ್ಮನವಾಗಿ ದೋರಿತು ಬ್ರಹ್ಮಾನಂದ । ದೋ...
ಧನ್ಯವಾದ ಮಹಿಪತಿ ಗುರು ಕೃಪೆಯಿಂದ ೫

## ೪೪೦

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಗುರುನಾಥ ಧ್ರುವ

ಏನೆಂದ್ಹೇಳಲಯ್ಯ ನೀವು ಮಾಡಿದುಪಕಾರ
ನಾನೇನುತ್ತೀರ್ಣಾದೇನು ಹೀನ ದೀನ ಕಿಂಕರ
ನೀನೆ ತ್ರಿಭುವನಕೆಲ್ಲ ಸುಖವಿಡುದಾರ
ಮುನಿಜನರ ಮಂದಾರ ಘನ ಸಹಕಾರ ೧

ಉಪಕಾರಕ ನೀ ಬಂದ್ಯೊ ಉಪಮೆರಹಿತ
ಉಪಾಯವದೋರಲಿಕ್ಕೆ ಕೃಪೆಯುಳ್ಳ ಸಮರ್ಥ
ತಾಪತ್ರಯ ಹರಿಸುವ ಶಕ್ತ ನೀನೆ ಶ್ರೀನಾಥ
ಈ ಪರಿಮಾಡುವರಿಲ್ಲ ಆಪ ನೀನೆ ಅನಂತ ೨

ಸಕಳಕೆ ಸಿಲುಕದ ಸುಖ ನೀಡಿದೆ ಅಯ್ಯ ನೀ
ಅಕಳಂಕ ನಿಜರೂಪ ಪ್ರಕಟಿಸಿದ ಅಯ್ಯ
ಸುಕಾಲ ಸುಭಿಕ್ಷದಿಂದ ಮಾಡಿದ್ಯೋ ನೀ ದಯ
ಅಖಿಳದೊಳು ಮಹಿಪತಿಯ ಪಿಡಿದ್ಯೊ ನೀ ಕೈಯ ೩

## ೪೪೧

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಗುರುನಾಥ
ಬಾಹ್ಯಾಂತ್ರ ಪರಿಪೂರ್ಣ ನೀನೆ ಸದೋದಿತ
ಸಹಕಾರ ನಿಜವಸ್ತು ನೀನೆ ಅಖಂಡಿತ
ಗುಹ್ಯ ತಿಳಿಯದೊ ನಿನ್ನ ಸದ್ಗುರು ಸಮರ್ಥ 	೧

ಸೆರಗ ಸಿಲುಕದೆಂದು ತಿರುಗಿತು ವೇದ
ಸರಸ್ವತಿ ಸ್ತುತಿಗೆ ತಾ ತೀರಲಿಲ್ಲ ಬೋಧ
ವರಣಿಸಲಿಕ್ಕೆ ಶೇಷ ತಲೆಯು ಬಾಗಿದ
ಮೊರೆ ಇಡುತಿಹುದೆಲ್ಲ ನಿನಗೆ ಗೋವಿಂದ 	೨

ಋಷಿಮುನಿಗಳಿಗೆ ತಾ ಪೆಸರೊಡೆಯದು
ತುಸು ಕೊರತೆಲ್ಲ ತಾ ಪಸರಿಸಿಹ್ಯದು
ಮಸಿ ಮಣ್ಣಾಯಿತು ಲೋಕ ಹೆಸರಿಗೆ ಬಂದು
ದೆಸೆಗೆಟ್ಟಾಯಿತು ಬಹಳ ಉಸುರೊಡಿಯೆಂದು 	೩

ಮಾಡದ ಮಾಡಿತು ಲೋಕ ನೋಡೊ ನಿನಗಾಗಿ
ಬಡದ ಭವಣೆಬಟ್ಟು ಹಿಡಿಯಲಿಕ್ಕೆ ಹೋಗಿ
ಕೊಡಲಿಲ್ಲ ನಿಜಗುಟ್ಟು ಇವ್ಹನೀ ಅಡಗಿ
ಬೆಡಗು ನಿನ್ನದು ಬಹಳ ಅಹದೊ ನೀ ಯೋಗಿ 	೪

ಇದೆ ಮುಂದಣುವಾದ ನನ್ನದೇನು ಪಾಡು
ಸಾಧಿಸಿ ಸದ್ಗುರು ಕೃಪೆ ನೀನೆ ದಯಮಾಡು
ಒದಗಿ ಮಹಿಪತಿ ನೀ ದಯದಿಂದ ನೋಡು
ಸದಮಲ ಸುಖವಾದ ಸುಧಾರಸವ ಕೊಡು 	೫

## ೪೪೨

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಶ್ರೀಗುರುನಾಥ ತ್ರಾಹಿ
ತ್ರಾಹಿ ಎಂದವನಪರಾಧ ನೋಡದೆ ನೀ ಕಾಯಿ ಧ್ರುವ

ಪತಿತಪಾವನೆಂಬ ಬಿರುದು ನಿನಗೆ ಎಚ್ಚರಿಲ್ಲೆ
ಪ್ರತಿದಿನ ಮೊರೆ ಇಡಲಿಕ್ಕೆ ಮತ್ತಿದೆ ಸೋಜಿಗವಲ್ಲೆ
ಅತಿ ಸೂಕ್ಷ್ಮ ಸುಪಥವರಿಯಲಿಕ್ಕೆ ನಾ ಏನು ಬಲ್ಲೆ
ಹಿತದಾಯಕ ನನ್ನ ದೀನ ದಯಾಳು ನೀನೆವೆ ಅಲ್ಲೆ ೧

ತಪ್ಪಿಲ್ಲದೆ ನಿನ್ನ ಮೊರೆಯ ಹೋಗುವರೇನೊ ಏ ಶ್ರೀಪತಿ
ಒಪ್ಪಿಸಿಕೊಳ್ಳದಿದ್ದರಹುದೆ ಜಗದೊಳು ನಿನ್ನ ಖ್ಯಾತಿ
ಕೃಪೆಯುಳ್ಳ ಸ್ವಾಮಿ ನಿನ್ನದೆ ಸಕಲ ಸಹಕಾರ ಸ್ಥಿತಿ
ಅಪರಾಧ ಕ್ಷಮೆ ಮಾಡಿ ಸಲಹಬೇಕೆನ್ನ ಶ್ರೀಗುರುಮೂರ್ತಿ ೨

ಅನಾಥ ಬಂಧು ನೀ ಎಂದಾಡುತಿರಲಿ ಅನಾದಿಯಿಂದ
ನ್ಯೂನಾರಿಸದೆ ಬಾರದೆ ಬಿರುದಿಗೆ ತಾ ಕುಂದು
ಅನುದಿನ ಅನುಕೂಲ ಮುನಿಜನರಿಗೆ ನೀ ಬ್ರಹ್ಮಾನಂದ
ದೀನ ಮಹಿಪತಿ ಸ್ವಾಮಿ ಭಾನುಕೋಟಿತೇಜ ನೀ ಪ್ರಸಿದ್ಧ ೩

## ೪೪೩

ತ್ರಾಹಿ ತ್ರಾಹಿ ಶ್ರೀಗುರು ಅವಧೂತ
ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಸದ್ಗುರು ದೀನನಾಥ ಧ್ರುವ

ತಪ್ಪು ಕ್ಷಮೆಯ ಮಾಡೊನೀ ಸ್ವಾಮಿ ನಮ್ಮ
ಕೃಪಾಸಿಂಧು ಸದ್ಗುರು ಪರಬ್ರಹ್ಮ
ಪಾಪಿ ದುರಾಚಾರಿಯು ನಾಪರಮ
ಕೃಪೆಯಿಂದ ಕಾವದು ದಯನಿಮ್ಮ ೧

ಗುಣದೋಷ ನೋಡದಿರೊ ಶ್ರೀಹರಿ
ಘನ ದುರಿತ ಕೋಟಿಗಳ ಸಂಹಾರಿ
ನೀನಹುದೊ ಬಡವನಾಧಾರಿ
ಅನುದಿನ ಕಾಯೊ ನೀ ಪರೋಪರಿ ೨

ಒಮ್ಮೆ ಬಂಧನವ ಬಿಡಿಸೊ
ಸಮ್ಯಕ ಜ್ಞಾನ ಸಾರದೊಳು ಕೂಡಿಸೊ
ನಿಮ್ಮದಾಸ ಮಹಿಪತಿಯೆಂದೆನಿಸೊ
ಬ್ರಹ್ಮಾನಂದದೊಳು ನಲಿದಾಡಿಸೊ ೩

೪೪೪

ತ್ರಾಹಿ ಶ್ರೀ ಗುರುನಾಥ ತ್ರಾಹಿ ಸದ್ಗುರುನಾಥ
ತ್ರಾಹಿ ಕರುಣಾಳು ಗುರುಮೂರ್ತಿ ಸದೋದಿತ
ತ್ರಾಹಿ ಶ್ರೀನಾಥ ಕರುಣಿಸೆನ್ನನು
ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ದೀನ ನಾಥ
ತ್ರಾಹಿ ಅನಾಥಜನ ಬಂಧು ನೀ ಸಾಕ್ಷಾತ
ತ್ರಾಹಿ ಗುರು ಮನ್ನಾಥ ಕಾಯೊ ಎನ್ನನು ೧

ಹಿಂದೆ ಅನೇಕ ಜನ್ಮವನು ಸೋಸಿ
ಬಂದು ನಾನಾ ಹೀನಯೋನಿ ಮುಖದಲಿ ಜನಿಸಿ
ಕಂದಿ ಕುಂದಿದೆ ಗರ್ಭಪಾಶದೊಳು
ಅಂದಿಗಿಂದಿಗೆ ನಿಮ್ಮ ಕುರುಹು ಕಾಣದೆ ತಿರುಗಿ
ಮುಂದಗಾಣದೆ ಕುರುಡನಂತಾದೆ ಧರೆಯೊಳು
ಬಂದೆ ಶ್ರೀಗುರು ಪಾದವನ್ನರಿಯದೆ ೨

ಇಂದೆನ್ನ ಜನುಮ ಸಾಫಲ್ಯವಾಯಿತಯ್ಯ ಗುರು
ಇಂದು ಮುನ್ನಿನ ಪುಣ್ಯ ಉದಯವಾಯಿತು ಎನಗೆ
ಇಂದೆನ್ನ ಜೀವ ಪಾವನವಾಯಿತು
ಸಂದು ಹರಿಯಿತು ಜನ್ಮ ಮರಣ ಎನಗಿಂದು ತಾ

ಮುಂದೆ ಯಮಬಾಧೆ ಗುರಿಯಾಗುವದ್ಹಿಂಗಿತು
ತಂದೆ ಶ್ರೀಗುರು ಚರಣದರುಶನದಲಿ ೩

ದೇಶಿಗರ ದೇವನಹುದಯ್ಯ ಶ್ರೀಗುರುಮುನಿಯೆ
ಅಶೆಪೂರಿತ ಕಲ್ಪವೃಕ್ಷ ಚಿಂತಾಮಣಿಯೆ
ವಿಶ್ವ ವ್ಯಾಪಕ ಆತ್ಮ ಹಂಸಮಣಿಯೆ
ಈಶ ದೇವೇಶ ಸರ್ವೇಶ ಸದ್ಗುಣಮಣಿಯೆ
ವಾಸುದೇವನು ತ್ರೈಲೋಕ್ಯ ತಾರಕಮಣಿಯೆ
ಭಾಸಿ ಪಾಲಿಪ ಭವನಾಶ ಮಣಿಯೆ ೪

ಕರುಣ ದಯದಿಂದ ನೋಡೆನ್ನ ಶ್ರೀಗುರುರಾಯ
ತರಳ ಮಹಿಪತಿ ಪ್ರಾಣೊಪ್ಪಿಸಿಕೊಂಡು ಈ ದೇಹ
ಹೊರೆದು ಸಲಹುವದೆನ್ನ ಇಹಪರವನು
ಕರದ್ವಯ ಮುಗಿದು ಎರಗುವೆನು ಸಾಷ್ಟಾಂಗದಲಿ
ತಾರಿಸುವದೆಂದು ಸ್ತುತಿಸುವೆ ಅಂತರಾತ್ಮದಲಿ
ತ್ರಾಹಿ ತ್ರಾಹಿಯೆಂಬೆನು ಮನದಲಿ ೫

## ೪೪೫

ತಿಳಿಯದು ಶ್ರೀ ಗುರು ಮಹಿಮೆ ಧ್ರುವ

ಕ್ಷಿತಿಯೊಳು ನಿಜವೆಂದರಿಯಲಿಬಾರದು
ತೋರುವ ರೂಪದ ಮಾಟ
ನಿರ್ಮಿಸಿಹ್ಯ ಬ್ರಹ್ಮ ವಿಷ್ಣು ಮಹೇಶ ಉತ್ಪತ್ತಿ ಸ್ಥಿತಿ ಲಯದಾಟ
ಮರುಳಾಗಿ ದುರ್ಜನ ನಿಜವೆಂದ್ಹಿಡದಿಹ ಮಾಯ
ಮೋಹದ ಅವ್ಹಾಟ
ವರ್ಮವನರಿವರು ಗುರುಯೋಗ ಧರ್ಮದ
ಬ್ಯಾರಿಹ ಅನಿಮಿಷ ನೋಟ ೧

ರೂಪದ ಬೊಂಬೆಯು ತೋರಡಗುವ ಬಗೆ
ಕಂಭ ಸೂತ್ರದ ವಿಚಾರ
ನಿತ್ಯವಿಲ್ಲದನಿತ್ಯದ ಆಟವು ನಂಬಬಾರದು ಸಂಸಾರ
ನಂಬಿದವರು ಇಂಬಿಲ್ಲಿದೆ ಹೋದರು ಮಿತಿ ಇಲ್ಲದೆ ಅಪಾರ
ನಿಲುಕಡೆ ಇಲ್ಲದೆ ಸೂರ್ಯಾಡುವ ಬಗೆ ಇದು ಯಾತನೆ ಶರೀರ ೨

ಕನ್ನಡಿಯೊಳು ಹಣಹೊನ್ನವು
ಕಂಡಂತಾಗುವುದೇನು ಸಂತೋಷ
ಕನಸಿನೊಳಗೆ ಮಹಾ ದುರಿತವು
ಕಂಡಂತನುಭವಿಸುವದೇನು ಕ್ಲೇಶ
ಈ ಪರಿ ಸುಖದು:ಖ ಮಿಥ್ಯವೆಂದರಿಯದೆ ಸತ್ತು
ಹೋದರು ಶತಂ ಭೀಷ್ಮ
ಮಹಿಪತಿ ನಿನ್ನೊಳು ತಿಳಿದು ನೋಡುವದಿದು
ತೋರು ಗುರು ಜಗದೀಶ ೩

## ೪೪೬

ತೀರ್ಥಯಾತ್ರೆ ಎಂಬುದು ಇದೆ ನೋಡಿ
ಅರ್ತು ಸ್ವಾಮಿ ಸದ್ಗುರು ಪಾದ ಕೂಡಿ ಧ್ರುವ

ಭ್ರೂಮಧ್ಯವೆಂಬುದಿದೆ ಕಾಶಿ
ಬ್ರಹ್ಮಸುಖ ತುಳುಕುತಿದೆ ಸೂಸಿ
ನೇಮದಿಂದಲಿ ನೋಡಲು ಧ್ಯಾನಿಸಿ
ಕರ್ಮಪಾಶ ಹೋಯಿತು ಛೇದಿಸಿ ೧

ತ್ರೀವೇಣಿ ಸಂಗಮ ಸುಕ್ಷೇತ್ರ
ಜೀವ ಪ್ರಾಣ ಮಾಡಿತು ಪವಿತ್ರ
ದಿವ್ಯ ದೇಹವಾಯಿತು ಸರ್ವಗಾತ್ರ
ಭವಹಿಂಗಿ ಹೋಯಿತು ವಿಚಿತ್ರ ೨

ಭ್ರಮರ ಗುಂಫ ಎಂಬುದು ಗಯಾ
ನೇಮದಿಂದ ಕಂಡವಗ ವಿಜಯ
ಪ್ರೇಮಭಾವೆಂಬುದು ಸರ್ವಕ್ರಿಯ
ವರ್ಮದೋರಿತು ಗುರು ಪುಣ್ಯೋದಯ ೩

ಪೃಥ್ವಿ ಪರ್ಯವಣಿದೆವೆ ನೋಡಿ
ತತ್ವದೊಳೇಕತ್ವ ಸಮಗೂಡಿ
ಹಿತತ್ವವೆಂಬ ದಯ ಮಾಡಿ
ಕಥತ್ವವೆಂಬು ದೀಡಾಡಿ ೪

ಕಣ್ಣ ದೋರಿ ಬಂತೆನಗ ತಾರ್ಕಣ್ಯ
ಕಣ್ಣು ಕಂಡುಗೆಯಿತು ಧನ್ಯಧನ್ಯ
ಚಿಣ್ಣ ಮಹಿಪತಿಗಿದೆ ಸರ್ವಪುಣ್ಯ
ಇನ್ನೊಂದು ಪಥವ್ಯಾಕೆ ಅನ್ಯ ೫

## ೪೪೭

ಥಳ ಗುಟ್ಟೊಳುತೊಬ್ಬಳೆವಾಗೆದ ತಾ
ವಳಗುಟ್ಟಲೆ ದಟ್ಟದ ಬೆಳಗು ತಾಂ
ತಿಳಿಗೊಟ್ಟರೆ ಸದ್ಗುರು ಭಾಸುದು ತಾ
ಕಳೆಮುಟ್ಟಿದು ನೋಡಲು ಶಾಶ್ವತ ೧

ಅರಿಯೊ ಸುರಿಯೊ ಪರಮಾಮೃತ
ಬೆರಿಯೊ ಗುರುವೆಂದು ನೀ ಸುಗುರುತಾ
ಜರಿಯೊ ಮರಿಯೊ ಮದಗರ್ವನೆ ತಾ
ನೆರಿಯೊ ಗುರುಪಾದಕೆ ನೀ ತ್ವರಿತ ೨

ತಿಳಿ ಸರ್ಕನೆ ನಿನ್ನೊಳು ಬ್ಯಾಗ ತಾ
ಅಳಿ ತರ್ಕದ ಮಾತಿನ ಗರ್ವನೆ ತಾ

ತೊಳಿ ನರ್ಕಕೆ ಬೀಳುವ ತಾಮಸ ತಾ
ಸುಳಿ ಗರ್ಕನೆ ಸದ್ಗುರು ಪಾದದಿ ತಾ ೩

ಬಿಡು ಮರ್ಕಟ ಬುದ್ಧಿಯ ಭಾವನೆ ತಾ
ಕೂಡು ಸರ್ಕನೆ ಸುಮ್ಮನೆ ಗುರುವಿಗೆ ತಾ
ಸುಡು ನರ್ಕಕೆ ಬೀಳುವ ಪಾಶವ ತಾ
ತೊಡು ಮರ್ಕಟವಾದ ಸದ್ಗುಣ ತಾ ೪

ಹಿಡಿಯೊ ಪಡಿಯೊ ದೃಢಭಾವನೆ ತಾ
ಜಡಿಯೊ ಒಡನೆ ಗುರುಪಾದನಿ ತಾ
ಕಡಿಯೊ ಬಿಡದೆ ಭವಬಂಧನ ತಾ
ಕುಡಿಯೊ ರಸಸಾರವ ಅಮೃತ ೫

ನಡಿಯೊ ನುಡಿದಂತೆನೆ ಸನ್ನಮತ
ಹಿಡಿಯೊ ಪಡೆದಂತೆನೆ ಪಾದವ ತಾ
ಇಡದಂತೆನೆ ತುಂಬೆದ ಸದ್ಘನ ತಾ
ಕಡೆಗಾಂಬುದು ನೋಡಿದು ಶಾಶ್ವತಾ ೬

ತಿಳಿಯೊ ಬಳಿಯೊ ಒಳಗುಟ್ಟನೆ ತಾ
ಹೊಳಿಯೊ ಸುಳಿಯೊ ನೆಲಿಗೊಂಡಿದು ತಾ
ಕಳಿಯೊ ಅಳಿಯೊ ಅನುಮಾನವ ತಾ
ಕಳೆಕಾಂತಿಯ ನಿನ್ನೊಳು ತುಂಬ್ಯದ ತಾ ೭

ಒಳಗುಟ್ಟನೆ ಸಾಧಿಸಿ ನೋಡುವು ದೆಲ್ಲಾ
ಥಳಗುಟ್ಟುದು ಸಾಸಿರ ಪದ್ಮ ದಳ
ನೆಲೆಗೊಂಡರೆ ವಾಗುವ ತಾ ಸಫಲಾ
ತಿಳಕೊಂಬುದು ಸದ್ಗುರು ಸ್ವಾಮಿ ಬಲ ೮

ಬಿಡಬಾರದು ಸಂಗತಿ ಸಜ್ಜನರ
ಹಿಡಿಬೇಕಿದು ಒಂದೇ ನೋಡಿ ಸ್ಥಿರ
ಅಡಿ ಇಟ್ಟನೆ ಬಾಹುದು ಪುಣ್ಣಿದರಾ
ಪಡಕೊಂಡರೆ ಅಹುದು ಇಹಪರ ೯

ತಡಮಾಡದೆ ನೋಡುವುದೀ ಸುಪಥ
ಪಡಿಬೇಕಿದು ಒಂದೇ ಸುಸ್ವಹಿತ
ಒಡಗೂಡದೆ ಬಾರದು ಕೈಗೂಡಿ ತಾ
ಎಡಬಲಕೆ ತುಂಬಿದೆ ತುಳುಕುತ ೧೦

ದೃಢಭಕ್ತಿಗೆ ಜಾಗರ ತಾ
ಎಡಿಎಡಿಗೆ ಸಂದಿಸಿ ತುಂಬಿದೆ ತಾ
ಒಡಿಸಿಟ್ಟೆದ ಭಾಗ್ಯದ ನಿಧಿಯು ತಾ
ಪಡಕೊಳ್ಳಲೊ ಮಹಿಪತಿ ಪೂರ್ಣಹಿತ ೧೧

## ೪೪೮

ದತ್ತ ದತ್ತೆನ್ನಲು ಹತ್ತಿ ತಾಂ ಬಾಹನು
ಚಿತ್ತದೊಳಾಗುವಾ ಮತ್ತ ಶಾಶ್ವತನು
ದತ್ತ ಉಳ್ಳವನ ಹತ್ತಿಲೇ ಈಹನು
ವೃತ್ತಿ ಒಂದಾದರೆ ಹಸ್ತಗುಡುವನು ೧

ಎತ್ತ ನೋಡಿದರೆ ಮೊತ್ತವಾಗಿಹ ತಾಂ
ಉತ್ತಮೊತ್ತಮತಾನೆತ್ತುತಾ ಈತಾ
ಅತ್ತಲಿತ್ತಾಗದೆ ಹತ್ತಿಲೆ ಸೂಸುತ
ಮುತ್ತಿನಂತಿಪ್ಪನು ನೆಲಿಲೆ ಭಾಸುತಾ ೨

ದತ್ತನೆಂದೆನ್ನಲು ಕತ್ತಲೆಣ್ಯೋಗುದು
ಮೃತ್ಯು ಅಂಜುತಲಿ ಭೃತ್ಯನಾಗಿಹುದು

ದತ್ತನಿಂದಧಿಕ ಮತ್ತು ತಾಂ ಒಂದು
ಉತ್ತಮರಿಗೆ ತಾ ಸತ್ಯ ಭಾಸುದು ೩

ಒತ್ತಿ ಉನ್ಮನಿಯಾವಸ್ಥಿ ಯೊಳಾಡುವದು
ಸ್ವಸ್ತಮನಾದರೆ ವಸ್ತು ಕೈಗೂಡುದು
ಬಿತ್ತಿ ಮನ ಗುರುಭಕ್ತಿ ಮಾಡುವದು
ದತ್ತ ತನ್ನೊಳು ತಾನೆವೆ ಭಾಸುವದು ೪

ದತ್ತ ದತ್ತೆಂದು ತಾ ಅರ್ತ ಮಹಿಪತಿಯ
ಬೆರ್ತ ನೋಡಿದ ಮನವು ಸುಮೂರ್ತಿಯು
ಮರ್ತದೊಳಿದುವೆ ಸುಖವಿಶ್ರಾಂತಿಯು
ಮರ್ತುಹೊಗುವದು ಮಾಯದ ಭ್ರಾಂತಿಯು ೫

## ೪೪೯

ದತ್ತ ನಮ್ಮನಿ ದೈವ ಚಿತ್ತಮನದೊಳಗಿಹ್ಯ
ಎತ್ತ ಹೋದರು ನಮ್ಮ ಹತ್ತಿಲಿಹನೊ ೧

ಸುತ್ತ ಸೂಸುತಲಿಹ್ಯ ನಿತ್ಯ ನಿಜ ಘನವಾಗಿ
ಹೃತ್ಕಮಲದೊಳು ತಾಂ ಮುತ್ತಿನಂತೆ ೨

ಗುತ್ತಳಿದು ಒಳಗ ತಾಂ ಮುಥ್ಥಳಿಯು ಹೊಳೆವ ಪರಿ
ಮೊತ್ತವಾಗಿಹ್ಯ ಪೂರ್ಣ ನೆತ್ತಿವೊಳಗ ೩

ದತ್ತವುಳ್ಳವನಿಗೆ ಹತ್ತಿಸಂಗಡ ಬಾಹ
ವಿತ್ತ ಒಡಿವ್ಯಾಗೆ ತಾಂ ಕರ್ತುನಮ್ಮ ೪

ದತ್ತಗಿಂದಧಿಕ ಮತ್ತೊಂದು ದೈವವು ಕಾಣೆ
ಪೃಥ್ವಿಯೊಳು ಮಹಿಪತಿವಸ್ತು ಒಂದೆ ೫

## ೪೫೦

ದತ್ತವಧೂತ ಶ್ರೀ ಗುರು ಸಾಕ್ಷಾತ
ನಿತ್ಯವಾಗಿಹ್ಯ ನಿಜ ನಿರ್ಗುಣನೀತ ಪ

ನಿರ್ಗುಣ ನಿಶ್ಚಲ ಗಗನಾಕಾರ
ಸುಗುಣದಲಿ ತಾನೆ ಸಹಕಾರ ೧

ಸಹಕಾರನಹುದು ಸದ್ಗುರುನಾಥ
ಬಾಹ್ಯಾಂತ್ರದಲಿ ತಾನೆ ಪ್ರಖ್ಯಾತ ೨

ಪ್ರಖ್ಯಾತನಹುದು ತ್ರಿಗುಣರಹಿತ
ಮುಖ್ಯಮುನಿಗಳಿಗೆ ಮೋಕ್ಷ ಸುದಾತ ೩
ದಾತನಹುದು ತ್ರೈಲೋಕ್ಯದೊಳೀತ
ಈತನೆ ವಿಶ್ವದೊಳಗೆ ದೈವತ ೪

ದೈವತನಹುದು ದೇವಾದಿಗಳಾತ್ಮ
ಭವಹರ ಮೂರ್ತಿ ಶ್ರೀಹರಿ ಸರ್ವಾತ್ಮ ೫

ಹರಿ ಸರ್ವಾತ್ಮನಾಗಿಹ ನಿಜಪೂರ್ಣ
ಪರಿಪರಿ ಆಗುವ ಅಗಣಿತಗುಣ ೬

ಅಗಣಿತಗುಣ ಅಗಾಧ ಅಪಾರ
ನಿಗಮಗೋಚರ ನಿರುಮಪ ನಿರ್ಧಾರ ೭

ನಿರ್ಧಾರನು ನಿಜನಿಷ್ಟರಪ್ರಾಣ
ಸಾಧಕರಿಗೆ ಸದ್ಗತಿ ಸಾಧನ ೮

ಸಾಧನದೊಡೆಯನಹುದು ಶಾಶ್ವತ
ಆದಿದೇವ ಸಕಲಾಗಮ ಪೂಜಿತ ೯

ಪೂಜಿತ ಬ್ರಹ್ಮಾದಿಗಳ ಕೈಯ
ಮೂಜಗದೊಳು ರಾಜಿಸುತಿಹ ೧೦

ರಾಜಿಸುತಿಹ ತಾ ರಾಜರಾಜೇಂದ್ರ
ಸುಜನರ ದೃಷ್ಟಿಯೊಳಿಡದಿಹ ಸಾಂದ್ರ ೧೧

ಸಾಂದ್ರವಾಗಿಹನು ಸಾರ್ವಭೌಮ
ಇಂದ್ರಾಧಿಕರೊಂದಿತ ಮಹಿಮ ೧೨

ಮಹಿಮನಹುದು ಮುನಿಜನ ಮಂದಾರ
ಧ್ಯಾಯಿಸುವರ ನಿಜ ಸಾಕ್ಷಾತಾರ ೧೩

ಸಾಕ್ಷಾತಾರ ಶ್ರೀಗುರು ಜಗದೀಶ
ಮೋಕ್ಷಾಧಿಕರಿಗಳಾತ್ಮ ಉಲ್ಹಾಸ ೧೪

ಉಲ್ಹಾಸವೆ ನಿಜ ವಸ್ತುವೆ ತಾನು
ಕಲ್ಪದ್ರುಮ ನಿಜ ಕಾಮಧೇನು ೧೫

ಕಾಮಧೇನುವಾಗಿ ರಕ್ಷಿಸುವ
ಬ್ರಹ್ಮನಿಷ್ಠರ ಹೃದಯದಲಿ ಭಾಸಿಸುವ ೧೬

ಭಾಸುವ ಭಾಸ್ಕರಕೋಟಿ ಪ್ರಕಾಶ
ಋಷಿ ಮುನಿಗಳ ನಿಜಮಾನಸ ಹಂಸ ೧೭

ಹಂಸನಾಗಿ ವಿಶ್ವಂಭರಿತ
ಸೂಸುವ ಸರ್ವಾಂತ್ರಲಿ ಅನಂತ ೧೮

ಅನಂತ ಕೋಟಿ ಬ್ರಹ್ಮಾಂಡನಾಯಕ
ಅನುಭವಿಗಳಿಗೆ ದೋರುವ ಕೌತುಕ ೧೯

ಕೌತುಕದೋರಿದ ಕರುಣದಲ್ಯನಗೆ
ಜೀವಪಾವನಗೈಸಿದ ಜಗದೊಳಗೆ ೨೦

ಜಗದೊಳು ಸ್ತುತಿಸುವೆನು ಅನುದಿನ
ಶ್ರೀಗುರು ದತ್ತವಧೂತ ಪೂರ್ಣ ೨೧

ಪೂರ್ಣ ಸ್ಮರಿಸುವೆನು ಮನದೊಳು ನೋಡಿ
ಪುಣ್ಯ ಪ್ರಭೆಯ ನಿಜಘನ ಒಡಗೂಡಿ ೨೨

ಒಡಗೂಡಿದ ನಿಜಾನಂದದ ಗತಿಯು
ಕ್ಷಿತಿಯೊಳು ಕೊಂಡಾಡಿದ ಮಹಿಪತಿಯು ೨೩

## ೪೫೧

ದಾವನು ಗುರುಸಹವಾಸಿ
ಅವನಿದ್ದದ್ದೇ ಸ್ಥಳ ಕಾಶಿ ಧ್ರುವ

ಕೂಡಿದವರ ತ್ರಿತಾಪಭಂಗಾ
ರೂಢಿಗೆ ಮೆರೆವಳು ಜ್ಞಾನಗಂಗಾ
ಮೂಡಿಹ ಆತ್ಮಜ್ಯೋತಿ ಲಿಂಗಾ
ಕಂಡಿಹ ಗುಣರಾಸೀ ೧

ವಿವರಿಸಿ ತಾರಕಮಂತ್ರದ ನೆಲಿಯಾ
ಕಿವಿಯೊಳು ಹೇಳಲು ಗುರುರಾಯಾ
ಅವನಿಗಿನ್ನೆಲ್ಲಿಯದು ಭವ ಭಯಾ
ಸ್ವಾನಂದವ ಬೆರೆಸೀ ೨

ಜನದಲಿ ನಾನಾ ಸಾಧನ ಜರಿದು
ಮನದಲಿ ಒಂದೇ ನಿಷ್ಠೆಯ ಹಿಡಿದು
ಅನುಮಾನದ ಸಿದ್ಧಾಂತಗಳದು
ಸದ್ಭಾವನೆ ಒಲಿಸೀ ೩

ಪ್ರೇಮಿಯ ನಿಜಸುಖ ಪ್ರೇಮಿಕ ಬಲ್ಲಾ
ಈ ಮನುಜರಿಗಿದು ಭೇದಿಸುದಲ್ಲಾ
ಶ್ರೀ ಮಹಿಪತಿ ಬೋಧಿಸಿದನು ಸೊಲ್ಲಾ
ಪೂರಿಸಿ ಮನದಾಸಿ ೪

## ೪೫೨

ದೇವನೀತ ಅವಧೂತ ಜೀವ ಜೀವ ಭಾವಭೋಕ್ತ
ಕಾವ ದೈವ ಪ್ರಾಣನಾಥ ದೇವಾಧಿದೇವನೆ ಈತ ೧

ಶ್ರೀದೇವ ದೇವ ನಿರ್ವಿಕಲ್ಪ ನಿರಾಕಾರ ನಿರ್ವಿಶೇಹ ನಿರಂತರ
ಸರ್ವಸಾಕ್ಷಿ ಸರ್ವಾಧಾರ ಸರ್ವಾತೀತ ಸರ್ವೇಶ್ವರ . ೨

ಸಾಧುಜನರ ಹೃದಯ ಸದೋದಿತಾನಂದೋದಯ
ಆದಿ ಅನಾದಿ ನಿಶ್ಚಯ ಇದೆ ಇದೆ ವಸ್ತುಮಯ ೩

ಪತಿತಪಾವನ ಪೂರ್ಣ ಅತಿಶಯಾನಂದಗುಣ
ಭಕ್ತಜನರುದ್ಧರಣ ಸತತ ಸುಖನಿಧಾನ ೪

ಜ್ಞಾನಗಮ್ಯ ಗುಣಾತೀತ ಅನಾಥಬಂಧು ಗುರುನಾಥ
ಭಾನುಕೋಟಿ ತೇಜನೀತ ದೀನಮಹೀಪತಿ ದಾತ ೫

## ೪೫೩

ದೇವ ನೀನಹುದೋ ನಮ್ಮ ಸ್ವಾಮಿ ಅವಧೂತ
ಸ್ವಾಮಿ ಅವಧೂತ
ಕಾವ ಕರುಣನೆ ಪೂರ್ಣ ನೀನೆ ಸದೋದಿತ ಧ್ರುವ

ಕರುಣ ದಯದ ಹುದಯ್ಯ ನೀಆಧಾರ
ಶರಣ ಜನರಿಗಹುದಯ್ಯ ನೀಆಧಾರ
ತಾರಿಸುವ ಸ್ವಾಮಿ ಅಹುದಯ್ಯ ನೀ ನಿರ್ಧಾರ
ಪರಮ ದಯಾನಿಧಿ ನೀ ಸುಜ್ಞಾನದ ಸಾಗರ ೧

ಅನಾಥನಾಥನಹುದೊ ಪೂರ್ಣ ದೀನಾನಾಥ
ಸನಾಥ ಮಾಡುತಿಹ್ಯ ಶ್ರೀಸದ್ಗುರು ನೀ ಸಾಕ್ಷಾತ
ಅನಾದಿ ನಿಜವಸ್ತು ಅಹುದಯ್ಯ ನೀ ಪ್ರಖ್ಯಾತ
ಮುನಿ ಜನರಿಗೆ ನೀ ಆನಂದ ಸುಪಥ ೨

ದೇಶಿಕರ ದೇವನಹುದಯ್ಯ ಕೃಪಾಕರ
ಲೇಸು ಲೇಸಾಗೆನ್ನ ಪಾಲಿಸುವ ನೀ ದಾತಾರ
ಭಾಸುತಿಹ ಭಾನುಕೋಟಿತೇಜ ಮನೋಹರ
ದಾಸ ಮಹಿಪತಿ ಗುರು ನೀನೆ ಸಹಕಾರ ೩

## ೪೫೪

ಧರ್ಮಕೊಬ್ಬ ದಾತ ನೀನೆ ಸ್ವಾಮಿ ಶ್ರೀಗುರುನಾಥ
ವರ್ಮ ತೋರಿಕೊಡುವ ನಿಮ್ಮ ಧರ್ಮಗುಣ ಪ್ರಖ್ಯಾತ ಧ್ರುವ

ಧರೆಯೊಳು ಸರಿಯಗಾಣೆ ಗುರುಧರ್ಮದಿಂದಧಿಕ
ಕರುಣಿಸಿ ಆನಂದದಿಂದ ತೋರುತಿಹ್ಯ ಬ್ರಹ್ಮಸುಖ
ವರಮುನಿಗಳ ಪ್ರಿಯ ಶರಣಜನಪಾಲಕ
ಪರಮ ಸುಪಥದೋರಿ ಹೊರೆವ ಪೂರ್ಣತಾರಕ ೧

ಒಡವನಾಧಾರಿ ನೀನು ಒಡಿಯನಹುದೊ ನಿಶ್ಚಯ
ಕೊಡುವ ಭಕ್ತಿ ಮುಕ್ತಿದಾತ ದೃಢಭಕ್ತರಾಶ್ರಯ
ಒಡಲ ಹೊಕ್ಕಿಹೆ ನಿಮ್ಮ ಕಡೆಯಗಾಣಿಸೊ ನಮ್ಮಯ್ಯ
ಪಿಡಿದು ನೀ ಎನ್ನ ಕೈಯ ಕೊಡು ತೋರಿ ನಿಮ್ಮ ಸೊಹ್ಯ ೨

ಪೊಡವಿಯೊಳು ಕ್ಷಮೆ ಎನಗೆ ಕೊಡು ಕರುಣಾಕಟಾಕ್ಷ
ನೋಡಿ ನಿಮ್ಮ ದಯದಿಂದ ನೀಡೊ ನಿಜ ಸುಭಿಕ್ಷ
ಬಿಡದೆ ಎಂದೆಂದು ನೀನು ಮಾಡೊ ಸಂರಕ್ಷ
ಮೂಢ ಮಹಿಪತಿಗಿನ್ನು ಪೂರಿಸೊ ಮನದಪೇಕ್ಷ ೩

## ೪೫೫

ಧುಮ್ಮಸಾಲೆನ್ನಿರ್‍ಯೋ ಶ್ರೀ ಗುರುವಿನ ಬಳಗವೆ
ಧುಮ್ಮಸಾಲೆನ್ನಿ ಸದ್ಗುರುವಿನ ಬಳಗವೆ ಧ್ರುವ

ಗುರುವಿನ ಬಳಗವೆಂದು ಗುರುತುವಿಟ್ಟು ನೋಡಿರ್‍ಯೋ
ಅರುಹಿನೊಳು ಮುಣಗಿ ಪರಮಸುಖ ಸೂರ್‍ಯಾಡಿರ್‍ಯೋ
ಗರ್ವಿನಾಹರಿಗೆ ಬಿಟ್ಟು ಹರಿದುಹೋಗ ಬ್ಯಾಡಿರ್‍ಯೋ
ಪರ್ವಣಿದೆ ಗುರುಕರುಣ ಪಡೆದು ಪೂರ್ಣಕೂಡಿರ್‍ಯೋ ೧

ಧುಮ್ಮಸಾಲೆನ್ನಿರ್‍ಯೋ ಬೆರದು ಬ್ರಹ್ಮ ಸುಖವ
ಸಮ್ಯಜ್ಞಾನದಿಂದ ದೂರಮಾಡಿ ಭವದು:ಖವ
ನಿಮ್ಮ ನಿಮ್ಮೊಳು ನೋಡಿ ಘನ ಕೌತುಕವ
ಹ್ಯಮ್ಮಿಯೊಳಗಾಗಿ ನೀವು ಹೋಗಬ್ಯಾಡಿ ಹೋಕುವ ೨

ಕಣ್ಣದ್ಯರದು ನೋಡಿರ್‍ಯೊ ಚಿನ್ನುಮಯ ರೂಪವ
ಭಿನ್ನವೆಲ್ಲದ್ಯದೆ ತನ್ನೊಳು ಸಮೀಪವ
ಪುಣ್ಯ ಹಾನಿ ಮಾಡಿಕೊಂಡು ಹಿಡಯಬ್ಯಾಡಿ ಕೋಪವ
ಕಣ್ಣ ದ್ಯರಸಿಕುಡುವ ಹಚ್ಚಿ ಗುರು ತಾನ ದೀಪವ ೩

ನಮ್ಮ ನಿಮ್ಮ ದ್ಯಾವರೆಂದು ಹೊಯಿದಾಡಬ್ಯಾಡಿರ್‍ಯೋ
ಬೊಮ್ಮನ ಪಡದ ಪರಬ್ರಹ್ಮನೊಬ್ಬ ನೋಡಿರ್‍ಯೋ
ಇಮ್ಮನಕ ಹೋಗದೆ ಒಮ್ಮನವ ಮಾಡಿರ್‍ಯೋ
ಸುಮ್ಮನೆ ಸುವಿದ್ಯದೊಳು ಬೆರದು ನಿಜಗೂಡಿರ್‍ಯೋ ೪

ಸುಗ್ಗಿಯೋ ಸುಗ್ಗಿಯೋ ಸುಜ್ಞಾನದ ಲಗ್ಗಿಯೋ
ಭಾಗ್ಯವಿದೆ ನೋಡಿ ಭಕ್ತಿ ಜ್ಞಾನ ವೈರಾಗ್ಯಯೋ
ಬಗ್ಗಿ ನಡವ ಸಾಧುಸಂತ ಜನರಿಗಿದು ಯೋಗ್ಯಯೋ
ಹಿಗ್ಗಿ ಹರುಷಪಡುವ ಮಹಿಪತಿಯ ನಿಜ ಸ್ರಾಪ್ಯಯೋ ೫

## ೪೫೬

ನಗುರೋರಧಿಕಂ ನಗುರೋರಧಿಕಂ ನಗುರೋಽರಧಿಕೆಂಬುದೆ ಪಂಥ
ಬಗೆದನುಭವ ಜಗದೊಳು ನೆಲೆಗೊಂಬುದಿದೊಂದೆ ಪಂಥ
ನಿಗಮಗಳಿಗೆ ಸುಗಮಾಗಿ ತೋರುವ
ಜಗದೋದ್ಧಾರಕ ಸದ್ಗುರು ಪಥ ೧

ಪತಿತ ಪಾವನ ಬಿರುದನೆ ಖರೆ ಮಾಡುವದಿದೊಂದೆ ಪಥ
ಯತಿ ಮುನಿಜನ ಮನೋಹರ ಮಾಡುವದಿದೊಂದೆ ಪಥ
ಅತಿಶಯಾನಂದನುಪಮವಾಗಿಹ ನಿಜ
ಸತ್ಯ ಸನಾತನ ಗುರುಪಥ ೨

ಅನಾಥನಾಥನಾಗ್ಯನುಭವ ತೋರುವದಿದೊಂದೆ ಪಥ
ಅಣು ರೇಣುಕ ಪರಿಪೂರ್ಣವಾಗಿಹದಿದೊಂದೆ ಪಥ
ದೀನ ಮಹಿಪತಿಗೆ ಸನಾಥ ಮಾಡುವ
ಭಾನುಕೋಟಿ ಪ್ರಕಾಶಿಸುವದೊಂದೆ ಪಥ ೩

## ೪೫೭

ನಮ್ಮಯ್ಯ ಗುರು ನಾ ನಿಮ್ಮ ಮನಿಯ ಶ್ವಾನ
ಹೆಮ್ಮೆಯೆಂಬ ಹಲ್ಲು ಮುರಿದೆ ಪೂರ್ಣ
ಸುಮ್ಮನಿರುವೆ ಕಂಡು ಸಂತತ ಚರಣ
ಒಮ್ಮನದಿಂದೆ ತೃಪ್ತ್ಯಾಯಿತು ಜೀವನ ೧

ಸದ್ಬೋಧದನ್ನ ನೀಡಲು ಓಡಿಬಂದೆ
ಸದ್ಗುರುವೆ ಒಡೆಯ ನೀನಹುದೆಂದೆ
ಬಿದ್ದುಕೊಂಡಿಹೆ ನಾ ನಿಮ್ಮ ಮನೆಯ ಮುಂದೆ
ಬುದ್ಧಿವಂತರು ಬೆನ್ನಟ್ಟಿ ಹೋಗೆ ಹಿಂದೆ ೨

ಹಳಿಯೆಂದರೆ ನಾ ಹೋಗೆ ಎಂದೆಂದಿಗೂ ಬಿಟ್ಟು
ಕೇಳಿಕೊಂಡಿಹೆ ಗುಹ್ಯ ವಾಕ್ಯದ ಹೆಜ್ಜೆ ಮೆಟ್ಟು
ಸುಳವುದೋರಲು ನಿಮ್ಮ ಸದ್ಗತಿ ಮುಕ್ತಿಯುಂಟು
ತಿಳದ್ಹಾಕಿಹನಾ ನಿಮ್ಮ ಪಾದರಕ್ಷಕೆ ಗಂಟು ೩

ಬಾಗಿಲಕಾಯಿಕೊಂಡು ಬಿದ್ದಿಹ್ಯ ನಿಮ್ಮ ಶ್ವಾನ
ಹಗಲಿರುಳು ನಾ ನಿಮ್ಮ ಬೊಗುಳವೆ ನಿಜಗುಣ
ಜಾಗಿಸುವದೆನ್ನೊಳು ನಮ್ಮಯ್ಯ ನಿಮ್ಮ ಖೂನ
ಸುಗುಮದಿಂದ ದೊರೆಯಿತು ನಿಜ ಸ್ಥಾನ ೪

ಹಿಡಿದು ಕಚ್ಚಿಹೆ ನಿಮ್ಮ ಪಾದರಕ್ಷ ಸಂಪೂರ್ಣ
ಬಿಡೆ ಎಂದೆಂದು ನಾ ಹೋದರೆ ಜೀವ ಪ್ರಾಣ
ಪಿಡಿದು ಮಾಡುವೆ ನಾ ಜತನ
ಮೂಢ ಮಹಿಪತಿಗಿದೆ ಸುಖಸಾಧನ ೫

## ೪೫೮

ನಮೋ ನಮೋ ಎಂದು ನಾ ಮಾಡುವೆ ಘನ
ಮಹಿಮನಿಗೆ ನಮಸ್ಕಾರ
ಬ್ರಹ್ಮಾನಂದದಿ ಸಮರಸವಾದ ಸಪ್ರೇಮಿಗೆ ನಮಸ್ಕಾರ
ಕಾಮಕ್ರೋಧಗಳೆಂದು ನಿಷ್ಕಾಮದಿ ನೇಮದಲಿಹಗೆ ನಮಸ್ಕಾರ
ಶಮೆದಮೆದಲಿ ಸಮದೃಷ್ಟಿಗೂಡಿಹ ಸ್ವಾಮಿ ಸೇವಿಗೆ ನಮಸ್ಕಾರ ೧

ಆಶಿ ತಿಳಿದು ನಿರಾಶೆಯೊಳಿಹ ಉದಾಸಿಗೆ ನಮಸ್ಕಾರ
ಮೋಸ ಹೋಗದೆ ವ್ಯಸನ ವಿಷಯಕೆ
ಸುಮಿಲೊಂತಕಗೆ ನಮಸ್ಕಾರ
ಹುಸಿ ನುಡಿ ಮಿಸುಕದೆ ಹಸನಾಗಿಹ ಸುಭಾಸಿಗೆ ನಮಸ್ಕಾರ
ಸೂಸಿ ತುಳುಕದೆ ಕಾಸಿನಾಶೆಗೆ ಹರಿದಾಸರಿಗೆ ನಮಸ್ಕಾರ ೨

ಹೆಚ್ಚು ಕುಂದನೆ ರಚ್ಚಿಗೆ ತಾರದ ಸ್ವಚ್ಛಲಿಹಗೆ ನಮಸ್ಕಾರ
ಕಚ್ಚಿ ಕೈ ಬಾಯಿಲಿ ಹುಚ್ಚಾಗದ ನಿಶ್ಚಲೇಂದ್ರಿಗೆ ನಮಸ್ಕಾರ
ಮತ್ಸರಳಿದು ನಿರ್ಮತ್ಸರೊಳಿಹ ಸುನಿಶ್ಚಿತನಿಗೆ ನಮಸ್ಕಾರ
ಮೆಚ್ಚಿ ಘನದೊಳು ಇಚ್ಛೆಲಿಹ ಮಹಾ ಎಚ್ಚರಿಗೆ ನಮಸ್ಕಾರ ೩

ನಾ ನೀನೆಂಬುವ ನುಡಿ ನೀಗಿನ ಅನುಭವಿನಗೆ ನಮಸ್ಕಾರ
ಖೂನ ತಿಳಿದಿಹ ಸ್ವಾನುಭವದ ಸುಜ್ಞಾನಿಗೆ ನಮಸ್ಕಾರ
ತಾನೆ ತಾನಾಗಿಹ ಘನದೊಳು ನಿರಾಶನಿಗೆ ನಮಸ್ಕಾರ
ಮೌನದಲಿ ನಿಜಸ್ಥಾನದಲಿರುವ ಸುದಾನಿಗೆ ನಮಸ್ಕಾರ ೪

ಗರ್ವವಳಿದು ಸರ್ವವೇ ನಿಜ ತಿಳಿದ ನಿಗರ್ವಗೆ ನಮಸ್ಕಾರ
ತೋರ್ವ ಕರದೊಳು ಅರ್ವನುಭವನಿರ್ವಾಣಿಗೆ ನಮಸ್ಕಾರ
ನಿರ್ವಾಹದ ಸುಪರ್ವಾಣಿಯ ಫಲ ಇರ್ವನಿಗೆ ನಮಸ್ಕಾರ
ಸರ್ವಸುಖ ಸುರಿಸಿದ ಮಹಿಪತಿ ಶ್ರೀಗುರುವಿಗೆ ನಮಸ್ಕಾರ ೫

## ೪೫೯

ನಾದದ ಮನಿಯು ತಿಳಿಯದೆ ಬಾರದು ಸಾಧಿಸಿ ಸದ್ಗತಿ ಸುಖ
ಭೇದಿಸಿ ತಿಳಿದರೆ ಬೋಧದಿ ಮನವು ಎದುರಿಡುವದು ಧ್ರುವ

ಅನುದಿನ ಸಾಧಿಸಿಕೊಳ್ಳದೆ ತಿಳಿಯದು
ತನುವಿನೊಳಿಹ ಪ್ರಣಮವು
ಮುನಿಜನಗಳಿಗಿದೆ ಸಾಧನ ಮುಖ್ಯವು ಸ್ವಾನಂದದ ಸುಖಧನವು
ಏನ ಬಲ್ಲವು ಖೂನದ ಮಾತು ಹೀನ ಮರುಳ ಜನವು
ತಾನೆ ತಾನಾಗಿಹುದು ಓಮಿತ್ಯೇಕಾಕ್ಷರದ ಘನವು ೧

ಧಿಮಿ ಧಿಮಿಗುಡುತಿಹುದು ತನ್ನೊಳು
ಬಲು ತಾಳ ಭೇರಿ ಮೃದಂಗ
ಬ್ರಹ್ಮಾನಂದದ ಸುಖದೋರುವದು ಮೇದಿನಿಯೊಳು ಸತ್ಸಂಗ
ಒಮ್ಮನನಾದರೆ ಸಾಧಿಸಿಬಹುದು ಸುಮ್ಮನೆ ಪ್ರಾಣಲಿಂಗ
ಘಮ ಘಮಗುಡುತಿಹುದು ಘನ ಮಹಿಮೆಯು
ಕೇಳುವದಂತರಂಗ ೨

ಸಾಧಿಸಿ ಕೇಳಿದ ಮಹಿಪತಿ ಅನುದಿನ ತನ್ನೊಳು
ಧಿಮ ಧಿಮಾಟ
ಹಾದಿ ತೋರಿಕೊಟ್ಟಿತು ಅಧ್ಯಾತ್ಮದ ಸದ್ಗುರುವಿನ ದಯನೋಟ
ನಾದದ ಮನೆಯು ಭೇದಿಸಿದವರಿಗೆ ಇದು ಬಲು
ಸುಪಥ ನೀಟ
ಸಾಧಕರಿಗೆ ತಾ ಸಾಕ್ಷಾತ್ಕಾರವು ಇದೆ ತೋರುವದು
ಮಣಿಮುಕುಟ ೩

## ೪೬೦

ನಿಜ ಗುಹ್ಯದ ಮಾತು ಸುಜನರಿಗಲ್ಲದೆ ತಿಳಿಯದು ಧ್ರುವ

ಕಣ್ಣಿಗೆ ಕಣ್ಣೇಳುವ ಮಾತು
ಪುಣ್ಯವಂತರಿಗಿದೆ ಹೊಳೆದೀತು
ಇನ್ನೊಬ್ಬರಿಗೇನು ತಿಳಿದೀತು ಚಿನ್ಮಯದ ವಸ್ತು ೧

ನೀತಿಗೆ ನಿಜವಾಗಿಹ್ಯ ಮುಗುಟ
ಮಾತಿಗೆ ಮುಟ್ಟದವನೆ ಬಲು ನಿಗಟ
ಮತಿಹೀನರಿಗಿದೇ ಒಗಟ ಯತಿಜನರಿಗೆ ಪ್ರಗಟ ೨

ಸೋಹ್ಯ ಸೊನ್ನೆಯ ಮಾತನೆ ಕೇಳಿಕೊ
ಗುಹ್ಯ ಹೇಳುವ ಗುರು ಬಳಕೊ
ಮಹಿಪತಿ ನಿನ್ನೊಳು ನೀ ತಿಳಕೊ ಸಿದ್ಧದ ಬಲು ಬೆಳಕೊ ೩

## ೪೬೧

ನಿಮ್ಮಿಂದ ಗುರು ಪರಮ ಕಲ್ಯಾಣವು
ನಿಮ್ಮಿಂದಲೆನಗೆ ಘನ ಪರಿಪೂರ್ಣವು ಧ್ರುವ

ಹುರಿದು ಭವಬೀಜ ಧರೆಯೊಳುದಯ ಕರುಣದಲಿ
ಪರಮ ಆನಂದ ಸುಖ ಮಳೆಯಗರೆದು
ಕರ್ಮ ಪಾಶಗಳೆಂಬ ಕರಿಕಿ ಬೇರವು ಕಿತ್ತಿ
ಹರಗಿ ಬಿತ್ತಲು ನಾಮ ತಾರಕುಪದೇಶದಲಿ ೧

ವರ ಪ್ರತಾಪದ ಬೆಳೆಯು ತುಂಬಿ ತುಳುಕುವ ಸಿರಿಯು
ಸರ್ವಮಯವೆಂಬ ತೆನೆಗಳು ತುಂಬಿ
ಏರಿ ಸುಷಮ್ನನಾಳದ ಮಂಚಿಕಿಯ ಮೆಟ್ಟಿ
ಪರಿಪರಿ ಅವಸ್ಥೆ ಹಕ್ಕಿಗಳು ಹಾರಿಸಲಾಗಿ ೨

ಮುರಿದು ಭೇದಾಭೇದವೆಂಬ ಗೂಡಲೊಟ್ಟಿ
ಅರಿವು ಕಣದಲಿ ಥರಥರದಲಿಕ್ಕಿ
ಜ್ಞಾನ ವೈರಾಗ್ಯವೆಂಬೆರಡೆತ್ತುಗಳ ಹೂಡಿ
ಸರ್ವಗುಣ ತೆನೆ ತೆಗೆದು ತುಳಿದು ರಾಸಿಮಾಡಿಸಲಾಗಿ ३

ಸರ್ವಮಯವೆಂಬ ರಾಶಿಯು ಒಬ್ಬುಳಿಯ ಮಾಡಿ
ತೂರಿ ತರ್ಕ ಭಾಸ ಗಳೆದು
ಮಿಥ್ಯಾಪ್ರಪಂಚವೆಂಬ ಕಾಳವು ಕಡೆಮಾಡಿ
ಸಫಲ ಸಹಕಾರದಲಿ ಸುಗ್ಗಿ ಮಾಡಿಸಲಾಗಿ ೪

ಏಕೋ ಬ್ರಹ್ಮದ ಗತಿ ನಿಧಾನ ರಾಶಿಯುದೋರಿ
ಜನ್ಮ ಮರಣವು ಕೊಯಿಲಿಯ ಸುಟ್ಟು ಉರುಹಿ
ಸದ್ಗತಿ ಮುಕ್ತಿ ಸುಕಾಲ ಸಾಧನವಿತ್ತು
ಮೂಢ ಮಹಿಪತಿ ಪ್ರಾಣ ಸದ್ಗೈಸಲಾಗಿನ್ನು ೫

## ೪೬೨

ನೋಡಿದರೆ ತನ್ನೊಳಗದೆ ಗೂಢವಾಗದೆ ಧ್ರುವ
ಸೋಹ್ಯ ತಿಳಿಯಗೊಡದೆ ಮಾಯಾ ಮರಿ ಆಗ್ಯದೆ
ಕಾಯದೊಳಗೆ ತಾನಾದೆ ಗುಹ್ಯವಾಗ್ಯದೆ ೧

ಅಡಿ ಮೇಲು ತಿಳಿಯದೆ ಬಿಡದೆ ಸೂಸುತಲ್ಯದೆ
ಹಿಡಿದೇನೆಂದರೆ ಬಾರದು ಇಡದು ತುಂಬ್ಯದೆ ೨

ತೋರಿಕೆ ತೋರಿಸದೆ ಪರಿಪೂರ್ಣ ತಾನಾಗ್ಯದೆ
ಮೂರುಗುಣಕೆ ಮೀರ್‍ಯದೆ ಬ್ಯಾರೆ ತಾನದೆ ३

ಕರುಣಿಸಿ ನೋಡುತದೆ ಕರೆದರೋ ಎನುತದೆ
ಬ್ಯಾರೆ ನಿರಾಶೆವಾಗ್ಧಾದೆ ಹೊರೆಯುತಲ್ಯದೆ ೪

ನೀಲವರ್ಣದೊಳದೆ ಥಳಥಳಗುಡುತದೆ
ಮ್ಯಾಲೆ ಮಂದಿರದೊಳದೆ ಲೋಲ್ಯಾಡುತದೆ ೫

ಗುರುತ ಕಂಡವಗದೆ ಗುರುಸ್ವರೂಪವಾಗ್ಯದೆ
ಗುರು ಕೃಪೆ ಆದವಂಗದೆ ಸಾರಿ ಚಲ್ಯದೆ ೬

ಲೇಸಾಗಿ ಭಾಸುತದೆ ವಾಸನೆ ಪೂರಿಸುತದೆ
ದಾಸ ಮಹಿಪತಿಯೊಳದೆ ವಾಸವಾಗ್ಯದೆ ೭

## ೪೬೩

ನೋಡಿ ನಿಜಸುಖ ಕೂಡಿ ಗುರುಮುಖ ಧ್ರುವ

ವ್ಯರ್ಥವ್ಯಾಕೆ ಡಂಭ ಆರ್ತು ನಾಡಿಗುಂಭ
ಗುರ್ತುಮಾಡಿಕೊಡುವ ಪೂರ್ಣ ಗುರು ನಿರಾಲಂಬ ೧

ಜ್ಞಾನ ನಿಜಗೂಢ ಏನುಬಲ್ಲ ಮೂಢ
ಸ್ವಾನುಭವಕಾಗಿ ನೀವು ಮಾಡಿ ಮನದೃಢ ೨

ತೋರುತಿದೆ ಖೂನ ಪರಮ ಸೂಕ್ಷ್ಮ ಜ್ಞಾನ
ತರಳ ಮಹಿಪತಿ ನಿಜಾನಂದ ಸುಖಧನ ೩

## ೪೬೪

ನೋಡಿ ನೋಡಿ ನಿಮ್ಮೊಳು ನಿಜಘನವ ಧ್ರುವ

ಆಧಾರ ದೃಢದಿಂದ ಆರು ಸ್ಥಳವ ಮುಟ್ಟಿ
ಆದಿ ಅನಾದಿಯ ಪಥವು ನೋಡಿ ೧

ಭೂಚರ ಖೇಚರಚಾಚರ ಗೋಚರ
ಅಲಕ್ಷ ಮುದ್ರೆಯ ಸ್ಥಾನ ನೋಡಿ ೨

ಪರಾಪಶ್ಯಂತಿಯು ಮಧ್ಯಮ ವೈಖರಿ
ವೇದಾಂತಾಕರದ ಸಾರ ನೋಡಿ ೩

ಪಂಚತತ್ವದ ಗತಿ ಪಂಚಪ್ರಾಣವದ ಸ್ಥಿತಿ
ಪಂಚಕರುಣಾಕೃತಿ ಗತಿ ನೋಡಿ ೪
ಸ್ಥೂಲ ಸೂಕ್ಷ್ಮಕಾರಣ ಮಹಾಕಾರಣ ನೋಡಿ
ಆನಂದಗತಿಯಲಿ ಬೆರೆದಾಡಿ ೫

ಅಕ್ಷರ ಕ್ಷರವು ಶಬ್ದನಿಶಬ್ದವು ಶೂನ್ಯ ಮಹಾ
ಶೂನ್ಯ ನಿಶ್ಶೂನ್ಯ ನೋಡಿ ೬

ಮಹಿಪತಿಸ್ವಾಮಿ ಶ್ರೀಗುರು ಸರ್ವೋತ್ತಮ ನೋಡಿ
ಆನಂದಗತಿಯಲಿ ಬೆರೆದಾಡಿ ೭

## ೪೬೫

ಪಡಕೊ ನಿಜಗುರುತಾ ನಿಜಗುರುತಾ
ಪಡೆವದಿದೆ ನಿಜ ನೀ ಗುರುತಾ ಧ್ರುವ

ಸಾಧಿಸಿ ಗುರು ಗುರುತಾ, ಸಾಧಿಸಿ ಗುರು ಗುರುತಾ
ಅದೇ ತುಂಬೇದ ಜಗಭರಿತಾ ೧

ಮನ್ನಿಸೆ ತಿಳಿ ತ್ವರಿತಾ ಮನ್ನಿಸಿ ತಿಳಿತ್ವರಿತಾ
ನಿನ್ನದಲ್ಲಿದು ಹೊರತಾ ೨

ತರಣೋಪಾಯದ ವರತಾ ತರಣೋಪಾಯದ ವರತಾ
ಗುರುಕರುಣದ ದಯಗರತಾ ೩

ಪರಮ ಜ್ಞಾನಾಮೃತಾ ಪರಮ ಜ್ಞಾನಾಮೃತಾ
ತರಳ ಮಹಿಪತಿ ಮನೋಹರಾ ೪

## ೪೬೬

ಪ್ರೀತಿಡುವುದು ಘನವಸ್ತು ಶ್ರೀಸದ್ಗುರುಪಾದದಲಿ ಧ್ರುವ

ಮನವಿಟ್ಟರೆ ಬಾಹುದು ಘನವು ನೆನವಿಗೆ ಅನುಕೂಲದ
ನಿಜಧನವು
ಮುನಿಜನರಿಗಿದೆ ಸಾಧನವು ಅನುಭವದಾ ಗುಣವು ೧

ಭಾವಿಟ್ಟರೆ ಬಾಹನು ನೋಡಿ ದೇವಾಧಿದೇವನೆ ತಾ ಮೂಡಿ
ತವಿತವಿಸುವ ದಯಮಾಡಿ ಈವ್ವನು ಕೈಗೂಡಿ ೨

ರತಿಪ್ರೇಮನೆ ಇಟ್ಟುನೋಡಿ ಕ್ಷಿತಿಯೊಳು ಮಹಿಪತಿ
ಗುರು ನಿಜಗೂಡಿ
ಹಿತದೋರುವ ತನ್ನೊಳು ಒಡಮೂಡಿ ಅತಿಹರುಷದಿಗೂಡಿ ೩

## ೪೬೭

ಪೂಜೆ ಮಾಡುವ ಬನ್ನಿರೊ ಗುರುಪಾದ
ಪೂಜೆ ಮಾಡುವ ಬನ್ನಿರೊ ಧ್ರುವ

ತಿಳುಹು ತಿಳಿಯ ನೀರಿಲೆ ತನುವಿಲೆ ಅಭಿಷೇಕವ ಮಾಡುವ
ನಿರ್ಮಳವೆಂಬ ಸುವಸ್ತ್ರದಿಂದಲಿ ದಿವ್ಯ ಪೂಜೆಯ
ಮಾಡುವ ಬನ್ನಿರೊ ೧

ಶುದ್ಧ ಸುವಾಸನೆಯ ಗಂಧದಾರತಿ ಅಕ್ಷತಿಡುವ
ಸದ್ಭಾವ ಪರಿಮಳಪುಷ್ಪದಿಂದಲಿ ದಿವ್ಯ ಪೂಜಿ
ಮಾಡುವ ಬನ್ನಿರೊ ೨

ಅರವ್ಹೆಂಬ ದೀಪದಲಿ ಗುರುಸ್ವರೂಪವ ನೋಡುವ ಬನ್ನಿರೊ
ಪರಮಾನಂದ ಹರುಷ ನೋಡುತ ನಿಜ
ನಲಿದಾಡುವ ಬನ್ನಿರೊ ೩

ಭಕ್ತವತ್ಸಲ ಮೂರ್ತಿಗೆ ಸುಖದುಃಖ ಧೂಪಾರತಿ ಮಾಡುವ
ಏಕೋಚಿತ್ತವೆಂಬ ಏಕಾರತಿಯಿಂದ ಪೂಜಿ
ಮಾಡುವ ಬನ್ನಿರೊ ೪

ನೆನವು ನೈವೇದ್ಯದಲಿ ಮನ ಬುದ್ಧಿ ತಾಂಬೂಲವ ನೀಡುವ
ಪ್ರಾಣ ಮಹಿಪತಿಯ ಪಂಚಾರತಿಯಿಂದ ಪೂಜಿ
ಮಾಡುವ ಬನ್ನಿರೊ ೫

## ೪೬೮

ಬಲುಸೂಕ್ಷ್ಮ ಗುರು ಗೂಢವಿದ್ಯ
ನೆಲೆವಂತಗಿದು ನಿಜವಾಗುದು ಸಾಧ್ಯ ಧ್ರುವ

ಕಣ್ಣಿನ ಕೊನೆ ಮುಟ್ಟಿನೋಡಿ ನಿಜಖೂನ
ಉನ್ಮನವಾಗಿ ಬೆರೆದಾಡುವ ನಿಜಸ್ಥಾನ
ಚೆನ್ನಾಗ್ಯಾದಾನಂದ ಘನ
ಭಿನ್ನವಿಲ್ಲದೆ ಮಾಡಿ ನಿಜಗುರು ಧ್ಯಾನ ೧

ಜಾಗ್ರ ನಿದ್ರೆಯ ಮಧ್ಯ ಅರವಿನೊಳು ನಿಜಗೂಡಿ
ಶೀಘ್ರ ಸಿದ್ಧಾಂತನುಭವಿಸಿ ತಾಂ ನಿಜಮಾಡಿ
ಅಗ್ರ ಗುರುಪಾದವನು ಕೂಡಿ
ಸುಗ್ರಾಸ ಶುಕ ಮುನಿಗಳಿಗಿದೆ ನೋಡಿ ೨

ಶಿರದಲಿ ಕರವಿಟ್ಟು ನೋಡಿ ನಿಜವರ್ಮ
ಹರಿಸಿ ಅನೇಕ ಜನ್ಮಾಂತರದ ದುಷ್ಕರ್ಮ
ತರಳಮಹಿಪತಿಗಿದೆ ಸುಬ್ರಹ್ಮ
ಗುರು ಭಾಸ್ಕರಸ್ವಾಮಿ ಶ್ರೀಪಾದ ಧರ್ಮ ೩

## ೪೬೯

ಭಯ ನಿವಾರಣವು ಶ್ರೀಗುರು ದಿವ್ಯನಾಮ ನಿಮ್ಮ ನಾಮ ಧ್ರುವ

ಕ್ಲೇಶಪಾಶವು ಕತ್ತರಿಸಿ ದೋಷನಾಶವನು ಗೈಸಿ
ಪೋಷಿಸುವ ಕೇಶವ ನಿಮ್ಮ ನಾಮ ೧

ನರಕ ಘೋರದ ಘಟವೆಂಬ ನರಜನ್ಮದುರ್ಘಟ
ತಾರಿಸುವ ನಾರಾಯಣ ನಿಮ್ಮ ನಾಮ ೨

ಮದಮತ್ಸರವ ಜರಿಸಿ ಭೇದಾಭೇದವು ಹರಿಸಿ
ಸದ್ಗೈಸುತಿಹ ಮಾಧವ ನಿಮ್ಮ ನಾಮ ೩

ಗೋವಿಸಿಹ ವಿದ್ಯದ ಮಾಯಮೋಹವನಳಿಸಿ
ಭವ ಹಿಂಗಿಸುವ ಗೋವಿಂದ ನಿಮ್ಮ ನಾಮ ೪

ಇಷ್ಟಾರ್ಥಗಳ ಕೊಟ್ಟು ಕಷ್ಟಾರ್ಥ ಪರಿಹರಿಸಿ
ದೃಷ್ಟಾಂತದಲಿ ಹೊರೆವ ವಿಷ್ಣು ನಿಮ್ಮ ನಾಮ ೫

ಮೊದಲು ಮೂವಿಧಿಯಗಳು ಜರಿಸಿ ಸದಮಲ ಪುಣ್ಯ
ಪದವೀವ ಮಧುಸೂದನ ನಿಮ್ಮ ನಾಮ ೬

ತ್ರಿವಿಧಾಧ್ಯಾತ್ಮ ಸ್ಥಿತಿಗತಿಯ ಈವ ಶಾಸ್ತ್ರಗಳನರಿಸಿ
ಭಾವಭಕ್ತೀವ ತ್ರಿವಿಕ್ರಮ ನಿಮ್ಮ ನಾಮ ೭

ವರ್ಮಧರ್ಮವನರಿಸಿ ಕರ್ಮಪಾಶವ ಹರಿಸಿ
ಜನ್ಮ ತಾರಿಸುವ ವಾಮನ ನಿಮ್ಮ ನಾಮ ೮

ಶ್ರೀಕರವನಿತ್ತು ಸಿರಿಸಕಲ ಸೌಭಾಗ್ಯದಲಿ
ಸೃಷ್ಟಿಯೊಳು ಹೊರೆವ ಶ್ರೀಧರ ನಿಮ್ಮ ನಾಮ ೯

ಹರಿಸಿ ಸಂದೇಹ ಸಂಕಲ್ಪ ಬಾಧೆಯಗಳು
ಹರುಷ ಗತಿನೀವ ಹೃಷೀಕೇಶ ನಿಮ್ಮ ನಾಮ ೧೦

ಪರಬ್ರಹ್ಮದೊಳು ಬೆರಿಸಿ ಪರಮ ಪಾತಕ ಹರಿಸಿ
ಪರಮಗತಿನೀವ ಪದ್ಮನಾಭ ನಿಮ್ಮ ನಾಮ ೧೧

ದಾರಿದ್ರ್ಯ ದುರಿತ ವಿಧ್ವಂಸನಿಯ ಮಾಡಿ ಧರೆಯೊಳು
ದ್ಧರಿಸುವ ದಾಮೋದರ ನಿಮ್ಮ ನಾಮ ೧೨

ಸಕಲ ಪದವಿತ್ತ ಸುಖಸಾಧನವ ತೋರುತಿಹ್ಯ
ಅಖಿಳದೊಳು ಸಂಕುರುಷಣ ನಿಮ್ಮ ನಾಮ ೧೩

ವಾಸನೆಯು ಪೂರಿಸುತ ಭಾಷೆ ಪಾಲಿಸುತಿಹ
ಲೇಸಾಗಿ ಶ್ರೀವಾಸುದೇವ ನಿಮ್ಮ ನಾಮ ೧೪

ಪ್ರಾಣಪ್ರಿಯವಾಗಿ ಪ್ರಸನ್ನವಾಗುವ ಪೂರ್ಣ
ಪ್ರತ್ಯಕ್ಷವಿದು ಪ್ರದ್ಯುಮ್ನ ನಿಮ್ಮ ನಾಮ ೧೫

ಅನುಮಾನ ಪರಿಹರಿಸಿ ಅನುಭವಾಮೃತ ಸುರಿಸಿ
ಅನುಕೂಲಾಗುವ ಅನಿರುದ್ಧ ನಿಮ್ಮ ನಾಮ ೧೬

ಪೂರ್ವಕರ್ಮವ ಹರಿಸಿ ಪೂರ್ಣಕಳೆಯೊಳು ಬೆರೆಸಿ
ಪುಣ್ಯಪದವೀವ ಪುರುಷೋತ್ತಮ ನಿಮ್ಮ ನಾಮ ೧೭

ಅಧ್ಯಾತ್ಮ ಸುಖವರಿಸಿ ಸಿದ್ಧಾಂತವನು ತೋರಿ
ಅಧ್ಯಕ್ಷವಾಗುವಾಧೋಕ್ಷಜ ನಿಮ್ಮ ನಾಮ ೧೮

ನರಜನ್ಮವನು ಹರಿಸಿ ಹರಿಭಕ್ತಿಯೊಳು ಬೆರೆಸಿ
ಅರುವು ಕುರ್ಹುವ್ಹಿಡಿದ ನರಸಿಂಹ ನಿಮ್ಮ ನಾಮ ೧೯

ಅರ್ಚನೆಯು ಪ್ರಾರ್ಥನೆಯು ಪರಮಪೂಜೆಯನರಿಸಿ
ಅಚಲಪದವೀವ ಅಚ್ಯುತ ನಿಮ್ಮ ನಾಮ ೨೦

ಜನನ ಮರಣವನಳಿಸಿ ತನುಮದೊಳು ಬೆರಿಸಿ
ಜನುಮ ಹರಿಸುವ ಜನಾರ್ದನ ನಿಮ್ಮ ನಾಮ ೨೧

ಉಪಮೆಯ ರಹಿತ ವಸ್ತುವುಪಾಯದಲಿ ತೋರಿ
ಕೃಪೆಯಿಂದ ಹೊರೆವ ಉಪೇಂದ್ರ ನಿಮ್ಮ ನಾಮ ೨೨

ಹರಿಸಿ ಅಹಂಭಾವ ಅರಿಸಿ ಅನುಭವ ಪೂರ್ಣ
ಸುರಿಸುವ ಸುಖ ಶ್ರೀಹರಿ ನಿಮ್ಮ ನಾಮ ೨೩

ಕರಕಮಲವಿಟ್ಟು ಶಿರದಲಿ ಸದ್ಗೈಸುತಿಹ
ಕರುಣಾಳು ಮೂರುತಿ ಶ್ರೀಕೃಷ್ಣ ನಿಮ್ಮ ನಾಮ ೨೪

ವೇದ ವಿಂಶತಿ ನಾಮ ಸಾರ ಸಂಧ್ಯಾಯನದಿ
ಮಹಿಪತಿಯ ಹೊರೆವ ಶ್ರೀಗುರು ನಿಮ್ಮ ನಾಮ ೨೫

## ೪೭೦

ಭಾಸ್ಕರ ಗುರು ನಮ್ಮ ಪಕ್ಷ ಭಾಸುತಿಹ ಪ್ರತ್ಯಕ್ಷ ಧ್ರುವ

ಪೂರಿಸಿ ಮನದಾಪೇಕ್ಷ ಬೀರಿದ ಕರುಣಾಕಟಾಕ್ಷ
ತೋರಿದ ನಿಜಲಯ ಲಕ್ಷ ಅರುಹಿದ ಅನುಭವ ಸಾಕ್ಷ ೧

ಮಾಡಿಜ್ಞಾನ ಸುದೀಕ್ಷ ನೀಡಿದ ನಿಜ ಸುಭಿಕ್ಷ
ದೃಢಭಕ್ತರ ಕಲ್ಪವೃಕ್ಷ ಒಡೆಯನಹುದು ಸಂರಕ್ಷ ೨

ಮೂಢ ಮಹಿಪತಿಪಕ್ಷ ಬಿಡದೆ ಮಾಡುವ ಸಂರಕ್ಷ
ನೋಡುವ ಪುಂಡರೀಕಾಕ್ಷ ಕುಡುವ ಸದ್ಗತಿ ಸುಮೋಕ್ಷ ೩

## ೪೭೧

ಭಾಸ್ಕರ ಗುರುವರ ಮಗುಟ ವಿಶ್ವದೊಳೊಬ್ಬನೆ ಪ್ರಗಟ
ಭಾಸ್ಕರ ಗುರು ದಯನೋಟ ರಸಕಾಯ ಸವಿದುಂಬೂಟ ಧ್ರುವ

ಭಾಸ್ಕರ ಗುರು ನಿಜದಯ ಲೇಸುದೋರುವ ವಿಜಯ
ಭಾಸ್ಕರ ಗುರು ಅಭಯ ಹಸನಾದ ಪುಣ್ಯೋದಯ ೧

ಭಾಸ್ಕರ ಕರುಣಾಕಟಾಕ್ಷ ಭಾಸುದು ಘನಪ್ರತ್ಯಕ್ಷ
ಭಾಸ್ಕರ ಗುರು ನಿಜ ಭಿಕ್ಷ ಹಸನಾಗಿ ಮಾಡುವಾ ಸಂರಕ್ಷ ೨

ಭಾಸ್ಕರ ಗುರು ನಿಜಬೋಧ ಭಾಸುವ ಘನಸರ್ವದಾ
ಭಾಸ್ಕರ ಗುರು ಪ್ರಸಾದ ಸ್ವಸುಖದೋರುವ ಸಂವಿಸ್ವಾದ(?) ೩

ಭಾಸ್ಕರ ಗುರು ಉಪದೇಶ ಭಾಸಲು ಬಲು ಸಂತೋಷ
ಭಾಸ್ಕರ ಗುರುವರೇಶ ಈಶನಹುದೊ ಸರ್ವೇಶ ೪

ಭಾಸ್ಕರ ಗುರುಕೃಪೆ ಜ್ಞಾನ ಲೇಸಾಗಿ ತೋರುವದುನ್ಮನ
ಭಾಸ್ಕರ ಗುರುದಯ ಕರುಣ ದಾಸ ಮಹಿಪತಿಗಾಭರಣ ೫

## ೪೭೨

ಭಾಸ್ಕರ ಗುರುವಿನ ಭಾಸನುದಿನವಿರೆ ಆಶಿನ್ನೊಬ್ಬರದ್ಯಾಕೆ
ಲೇಸಾಗಿಪ್ಪ ಘನದಯದಾಸ್ಯೆನಗಿರೆ ನಾಸ್ತ್ಯನಗೆಂಬುವದ್ಯಾಕೆ ಧ್ರುವ

ಸೂಸುತ ನಿಜ ನಿಧಾನದ ರಾಶಿರೆ ಕಾಸಿನ ಕಳವಳಿಕ್ಯಾಕೆ
ಭಾಸುತ ಬಾಹ್ಯಾಂತ್ರದಲಿರೆ ಘನಮಯ ದೇಶ್ಯಾಂತ್ರಡುರುವದ್ಯಾಕೆ
ವಾಸವಾಗ್ಹೆಜ್ಜೆಜ್ಜಿಗೆ ಗುರುವಿನ ಆಶ್ರಿನ್ನೊಬ್ಬರದ್ಯಾಕೆ
ಗ್ರಾಸಕೆದುರಿಡುತಿರೆ ಎನ್ನೊಡೆಯ ಸೋಸಿಲೆ ಬಯಸುವದ್ಯಾಕೆ ೧

ಗುರುದೈವೇ ಗುರುತಾಗಿರಲು ತಾ ಪರದೈವಗಳಿನ್ಯಾಕೆ
ಶಿರದಲಿ ಗುರು ಶಿಖಾಮಣಿ ಇರಲು ಶರಣು ಇನ್ನೊಬ್ಬರಿಗ್ಯಾಕೆ
ಕರುಣಾಮೃತ ಸುರರಸ ಮಳೆಗರೆವುತಲಿರೆ ಪರರಂಡಲೆವದ್ಯಾಕೆ
ಇರುಳ್ಹಗಲೆ ಗುರುದಯ ಕವಚೆನಗಿರೆ ದುರಿತಭವ ಭಯವ್ಯಾಕೆ ೨

ಇಹ್ಯಪರಕೆ ಗುರು ನಾಮವೆನಗಿರಲು ಸಾಹ್ಯಮನುಜರದ್ಯಾಕೆ
ಸಹಕಾರವೆ ಸದ್ಗುರು ಮೂರ್ತಿರಲು ಸಾಯಾಸವೆನಗ್ಯಾಕೆ
ಮಹಿಪತಿಸ್ವಾಮಿ ಶ್ರೀಪತಿ ಸಮರ್ಥಿರೆ ದುರ್ಮತಿಗಳ ಹಂಗ್ಯಾಕೆ
ಸಹಿತ ಗುರು ತಾಯಿತಂದೆನಗಿರೆ ಬಾಹ್ಯವಿಹಿತದವನ್ಯಾಕೆ ೩

## ೪೭೩

ಮನವೆ ಶ್ರೀಗುರು ಪಾದವ ನಂಬು
ನಿನಗಲ್ಯಾಹುದು ಘನ ಸುಖದಿಂಬು ೧

ಇಂಬಾಗಿಹುದು ಅನುದಿನ ನೋಡಾ
ನಂಬದೆ ನಿಜವನು ನೀ ಕೆಡಬ್ಯಾಡ ೨

ಬ್ಯಾಡೆಂಬುದು ಈ ಮಾತನೆ ಕೇಳು
ಬೇಡದೆ ಬಯಸದೆ ನಿಜದಲಿ ಬಾಳು ೩

ಬಾಳುವದೀಪರಿ ಜನದಲಿ ಲೇಸು
ತಿಳಿಯದೆ ಬಯಸುವದ್ಯಾತಕೆ ಸೋಸು ೪

ಸೋಸ್ಹಿಡಿದರ ಬೇಕಾಹುದು ಜನ್ಮ
ಸೋಸಿಲಿ ಹುಟ್ಟುದು ಆಸಿಯ ಕರ್ಮ ೫

ಕರ್ಮವೇ ತಾ ಮಾಡುದು ಭವ ಬಂಧ
ಮರ್ಮವ ತಿಳಿಯದವನೆ ತಾ ಅಂಧ ೬

ಅಂಧಗ ತಿಳಿಯದು ಆತ್ಮದ ಗೂಢ
ಸಂಧಿಸಿ ಬೀಳಲು ವಿಷದಲಿ ಮೂಢ ೭

ಮೂಢಗೆಲ್ಲಿಹ್ಯ ಆತ್ಮದ ವಿಚಾರ
ನೋಡುವ ನೋಟವು ಇದು ಬಲುದೂರ ೮

ದೂರಕೇ ನೀ ದೂರಾಗಿಬ್ಯಾಡ
ಅರಿಯಲು ತನ್ನೊಳು ಸಾರವೆ ನೋಡಾ ೯

ನೋಡುವುದಿದು ಗುರುಜ್ಞಾನದ ಗುಟ್ಟು
ಆಡಿದ ಅನುಭವ ಮಾತಿಗೆ ಮುಟ್ಟು ೧೦

ಮುಟ್ಟಿದ ಖೂನವು ಮಿಸುಕಲಿ ಬ್ಯಾಡ
ಘಟ್ಯಾಗಿ ನಿಜಘನ ಬೆರೆ ಗಾಢಾ ೧೧

ಗಾಢಾಗಿಹುದು ನಿಜಗುರು ಜ್ಞಾನ
ಮಾಡುವ ಧ್ಯಾನಕೆ ಅನುಸಂಧಾನ ೧೨

ಅನುಸಂಧಾನದ ಅನುಭವ ಸುಖ
ಉನ್ಮನದಲಿ ತಿಳಿವುದು ಗುರುಮುಖ ೧೩

ಗುರು ಮುಖದಲಿ ಬೆಳಗಾಹುದು ಪೂರ್ಣ
ಬೀರುವ ಪ್ರಭೆ ಸದ್ಗುರು ಕರುಣ ೧೪

ಕರುಣದ ಸಾಗರ ಗುರುವರ ಮೂರ್ತಿ
ಇರುಳ್ಹಗಲೆ ಕೊಂಡಾಡುವೆ ಕೀರ್ತಿ ೧೫

ಕೀರ್ತಿಯ ಕೊಂಡಾಡುವನೀ ಮಹಿಪತಿ
ಸಾರ್ಥಕವಿದು ಅನುಭವ ಮನೆಮೂರ್ತಿ ೧೬

## ೪೭೪

ಮನಸಿಲೆ ಮನ ನೋಡಿ ಘನ ಗುರುವಿನ ಸೇವೆಯ ಮಾಡಿ ಧ್ರುವ

ಮನದಲಿ ತಿಳಿಯದೆ ಮನಮೂಲ ಜನದೊಳು
ತೋರುದ್ಯಾತಕೆ ಶೀಲ
ಅನುಭವಾಗದೆ ಜ್ಞಾನದ ಕೀಲ ಜನ ಶೀಲದೆ ಶೂಲ ೧

ಮನದಿಂದಲಿ ಮನವಾಗದೆ ಸ್ವಸ್ತ ಘನಕೈಗೂಡುವದೆ ಸಾಭ್ಯಸ್ತ
ಅನಕಾ ಮಾಡುವದಸ್ತವ್ಯಸ್ತ ಖೂನಾಗದು ವಸ್ತ ೨

ಮನ ಉನ್ಮನವಾಗಲು ಪೂರ್ಣ ಖೂನವಾಗದು
ಮಹಿಪತಿ ಗುರುಚರಣ
ಭಾನುಕೋಟಿತೇಜನ ಕರುಣ ದೀನ ಉದ್ಧರಣ ೩

## ೪೭೫

ಮರತರ ತಾ ಮರವಲ್ಲದು ನೋಡಲು ।
ಅರತರತಾ ಅರವಲ್ಲದು ನಿಜದೊಳು ।
ಅರಹು ಮರದಲಿ ಎರಡನೇ ಮೀರಿಹ ।
ಘನದರುವೇ ತಾನಾಗಿ ।

ಕುರುವಿನೊಳಿರುವಾಗಿಹ ಸ್ವಾನಂದದಿ ।
ತೆರವಿಲ್ಲದೆ ಸಲೆ ತುಂಬಿತುಳುಕುತಿಹ ।
ಪರವೆಂದೆನಿಸಿದ ಶರಣ ರಕ್ಷಕ । ಗುರುಮಹಿಪತಿ
ಜಯ ಜಯತು ೧

ತೋರುವ ದೃಶ್ಯವ ಕಾಂಬುವ ನಯನಕ ।
ಸಾರಿಯಮನವನು ನೋಡುವ ಬುದ್ಧಿಗೆ ।
ಮೀರಿಹ ನಿತ್ಯ ನಿರಂಜನ ವಸ್ತುವೆ । ವಿಶ್ವ ಭರಿತನೆಂದು ॥
ಸಾರುವ ಶೃತಿಯಿಂದಾತ್ಮ ಪ್ರಚೀತಿಯ ।
ಸೇರಿಸಿಭಜನೆಯ ಕ್ರಮವನರಸಿ ಭವ ।
ವಾರಿಸಿ ಚಿತ್ಸುಖಲಿರಿಸಿದ ಮಹಿಪತಿ । ಸದ್ಗುರು ಜಯ ಜಯತು ೨

ಮೊದಲಿಗೆ ಜಯದಾರ್ಜ ಲಕ್ಷಣವನು ।
ಹೃದಯದಿ ನೆಲೆಗೊಳಿಸಿ ।
ಇದರದರಿಸಿ ಭವದ್ವೆದರಿಕೆ ಹಾರಿಸಿ ।
ಸದಮಲ ಬ್ರಹ್ಮನ ಕಳೆಯನು ತೋರಿಸಿ ।
ಮುದದಲಿ ಭಕ್ತರ ವಾಲಿಪ ಮಹಿಪತಿ ।
ಗುರುಮೂರ್ತಿಗೆ ಶರಣು ೩

ಆಡುವ ರೇಚಕ ಪೂರ್ವಕ ನಂದಿಯ ।
ಜೋಡಿಸಿ ಯರಡನೆ ಮೆರೆವಸುಷಿಮ್ನಿಯ ।
ನಾಡಿಯ ರತಿಕರ ಹೂಡುತ ಮೆಲ್ಲನೆ ।
ನಿಜಮನ ಸಾರಥಿಯಾ ।
ಕೂಡಿಸಿ ಹರುಷದ ತೇರಿ ನಡಸುತ ಸ ।
ಘಾಡಿರೆಯಿಂದಲಿ ಮೇಲ್ಗಿರಿಯಾತ್ರೆಯ ।
ಮಾಡಿವಿಲಾಸದ ಲಾಡಿದ ಮಹಿಪತಿ ।
ಗುರುಮೂರ್ತಿಗೆ ಶರಣ ೪

## ೪೭೬

ಷಾಡಿ ಗುರುಧ್ಯಾನ ನೋಡಿ ನಿಜಸ್ಥಾನ ಧ್ರುವ

ಹೋಗ ಹೋಗಬ್ಯಾಡಿ ಏಕವಾಗಿ ನೋಡಿ
ಜೋಕೆಯಿಂದ ಕೂಡಿ ಸುಖವು ಸೂರ್‍ಯಾಡಿ ೧

ನೋಡಿ ನಿಮ್ಮ ಖೂನ ಕೂಡಿ ಸಮ್ಯಜ್ಞಾನ
ಗೂಢ ಗುಹ್ಯ ಧನ ಮಾಡಿರೊ ಜತನ ೨

ಮಾಡಿ ಗುರುಸ್ತುತಿ ಮೂಢ ಮಹಿಪತಿ
ನೋಡಿ ನಿಜವ್ಯಕ್ತಿ ಪಡೆದ ಸದ್ಗತಿ ೩

## ೪೭೭

ಮುಖ್ಯಬೇಕು ಗುರುಭಕ್ತಿಗೆ ತಾ ಸದ್ಭಾವನೆ ಸಪ್ರೇಮ
ಸಿಕ್ಕಿ ಬಾಹ್ವ ಸಾಧಿಸಿ ತನ್ನೊಳು ಶ್ರೀಗುರುಸರ್ವೋತ್ತಮ ಧ್ರುವ

ಸೋಹ್ಯ ತಿಳಿದರೆ ಸಾಧಿಸಿಬಾಹುದು ಶ್ರೀಗುರುವಿನ ಶ್ರೀಪಾದ
ದೇಹ ನಾನಲ್ಲೆಂಬು ಭಾವನಿ ಬಲಿವುದು ತಾ ಸರ್ವದಾ
ಗುಹ್ಯಮಾತು ಗುರುತಕೆ ಬಾಹುದು ಸದ್ಗುರು ಸುಪ್ರಸಾದ
ಬಾಹ್ಯಾಂತ್ರದೊಳು ತಾನೆ ತಾನಾಗುವ ಬೋಧ ೧

ಕೀಲು ತಿಳಿದರೆ ಕಿವಿ ಸಂದಿಲ್ಯಾದೆ ಮೂಲಮಂತರದ ಖೂನ
ಕೂಲವಾದರೆ ಗುರುದಯದಿಂದಲಿ ಕೇಳಿಸುವದು ಪೂರ್ಣ
ಮ್ಯಾಲೆ ಮಂದಿರದೊಳು ತಾ ತುಂಬೇದ ಥಳಥಳಿಸುವ ವಿಧಾನ
ಶೀಲ ಸುಪಥ ಸಾಧಿಸಿ ಸದ್ಗತಿ ಸಾಧನ ೨

ಟೂಕಿ ಬ್ಯಾರ್‍ಯಾದೆ ಏಕೋಭಾವದಿ ಕೇಳಿರೊ ನೀವೆಲ್ಲ
ಹೋಕು ಹೋಗಿ ಹುಡುಕಿದರೆ ತಾ ಎಂದಿಗೆ ತೋರುವದಲ್ಲ
ನಾಲ್ಕು ಶೂನ್ಯ ಮೆಟ್ಟಿನೋಡೇಕಾಕ್ಷರ ತಾ ಸವಿಸೊಲ್ಲ
ಜೋಕೆಯಿಂದ ಜಾಗಿಸಿಕೊಡುವಾ ಮಹಿಪತಿಗುರು ಮಹಾಮಲ್ಲ ೩

## ೪೭೮

ಯಥಾದೇವೊ ತಥಾ ಗುರೌ
ಶ್ರುತಿ ಹೇಳಿದ ಸನ್ಮತಲಿರ್‍ಯೊ ಧ್ರುವ

ವೃಥಾ ಅಭಾವ ನೀ ಹಿಡುವರೆ
ಸ್ವತ: ಸಿದ್ಧವ ತಾಂ ಬಿಡುವರೆ
ಸತ್ಸಂಗದಲಿ ನೋಡಿನ್ನಾರೆ
ಚಿತ್ಸುಖ ಹೊಳೆವರು ಕಣ್ಣಾರೆ ೧

ಮುಗಿಲಿಗೆ ಮತ್ತೆ ಮುಗಿಲುಂಟೆ
ಹಗಲಿಗೆ ಹಗಲಾಗುದುಂಟೆ
ಜಗ ಇಹುದಕೆ ಜಗಮುಂಟೆ
ಹೀಗಾದ ಮ್ಯಾಲೆ ವಸ್ತು ಎರಡುಂಟೆ ೨

ಅನುಭವಕಿದರಿಟ್ಟು ಬಾಹುದು
ಖೂನ ಹೇಳವ್ಯಾವು ನೋಡು ವೇದ
ದೀನ ಮಹಿಪತಿಗಿದೆ ಬೋಧ
ಭಾನುಕೋಟಿತೇಜನೊಂದೇ ತಾನಾದ ೩

## ೪೭೯

ಲೇಸು ಲೇಸಾಯಿತು ಇಂದು ನೋಡಿ
ಭಾಸ್ಕರ ಪುಣ್ಯ ಪ್ರಭೆಯ ಕೂಡಿ ಧ್ರುವ

ಪುಣ್ಯ ಎದುರಿಟ್ಟು ಬಂದು ಮುಂದೆ
ಕಣ್ಣಾರೆ ಕಂಡು ತ್ರಾಹಿ ಎಂದೆ
ಸಣ್ಣ ದೊಡ್ಡದರೊಳು ವಸ್ತು ಒಂದೆ
ಬಣ್ಣ ಬಣ್ಣಾ ಗೀಹ್ಯದರಿಂದೆ ೧

ಹೇಳಬಾರದಯ್ಯ ನಿಜವರ್ಮ
ಕೇಳಿ ಶ್ರೀಸದ್ಗುರು ಪಾದಧರ್ಮ
ಅಳಿಯಿತು ನೋಡಿ ಪೂರ್ವ ಕರ್ಮ
ಹೊಳಿಯಿತೆನ್ನೊಳು ಘನ ಬ್ರಹ್ಮ ೨

ಸೋಹ್ಯ ದೋರಿ ಕೊಟ್ಟೆನಗಿಂದು
ಮಹಿಪತಿಸ್ವಾಮಿ ತಾನೆ ಬಂದು
ಈಹ್ಯಪರ ಪೂರ್ಣ ಕೃಪಾಸಿಂಧು
ಸಾಹ್ಯ ಮಾಡುತೀಹ್ಯ ದೀನ ಬಂಧು ೩

## ೪೮೦

ಲೇಸು ಲೇಸಾಯಿತು ನೋಡಿ ಭಾಸ್ಕರನ ಕೂಡಿ ಧ್ರುವ

ಲೇಸು ಲೇಸಾಯಿತು ನೋಡಿ ಸ್ವಸುಖಗೂಡಿ
ಆಶೆ ಪೂರಿಸಿದ ನೋಡಿ ಭಾಸಿ ನೀಡಿ ೧

ಶಿರದಲಿ ಅಭಯನಿಟ್ಟ ಹರುಷವ ಕೊಟ್ಟ
ಹರಿದು ಭವಜೀವ ಸುಟ್ಟ ಸ್ಮರಣಿಯೊಳಿಟ್ಟ ೨

ಮಾಯದ ಮೊನೆ ಮುರಿದ ಭಯ ಹರಿದ
ಸಾಯೋಜ್ಯಪದ ತೋರಿದ ದಯ ಬೀರಿದ ೩

ಸದ್ವಾಕ್ಯವೆ ಬೋಧಿಸಿದ ಸದ್ಗುಣದ
ಸದ್ಭಾವ ಭಕ್ತಿ ತೋರಿದ ಸದ್ಗೈಸಿದ ೪

ಅನುಭವ ಸುಖದೋರಿದ ಸ್ವಾನುಭವದ
ಮನವಿಗ್ಯೆನುಕೂಲಾದ ತಾನೆ ತಾನಾದ ೫

ಸವಿಸುಖವನುಣಿಸಿದ ಸುವಿದ್ಯದ
ರವಿ ಕೋಟಿ ಪ್ರಭೆಯ ತೋರಿದ ಅವಿನಾಶದ ೬

ತರಳ ಮಹಿಪತಿ ಪ್ರಾಣ ಗುರುನಿಧಾನ
ಹರುಷಗೈಸಿದ ಜೀವನ ಪರಮಪಾವನ ೭

## ೪೮೧

ಲೇಸು ಲೇಸಾಯಿತು ಭಾಸ್ಕರ ಗುರು ಕೃಪೆ
ಲೇಸು ಲೇಸಾಯಿತು ಮಾ ಧ್ರುವ

ಹಸ್ತವಿಡಲು ಎನ್ನ ಮಸ್ತಕದ ಮೇಲೆ
ಸ್ವಸ್ತಹೊಂದಿತು ಮನ ನಿಶ್ಚಯಲಿ
ವಿಸ್ತಾರದೋರುವ ವಸ್ತು ಇದೆಯೆಂದು
ವಿಸ್ತರಿಸೆನಗಿನ್ನು ದೋರಿತು ಮಾ ೧

ಸೋಂಕಲು ಶ್ರೀಗುರುಪಾದ ಎನಗಿನ್ನು
ಬೇಕಾದ ಸವಿ ಸುಖಗೊಟ್ಟಿತು ಮಾ
ಸಕಲೋತ್ತಮನಾದ ಏಕಾಕ್ಷರ ಬ್ರಹ್ಮ
ಏಕೋಮಯವಾಗಿದೋರಿತು ಮಾ ೨

ನೀಡಲು ನಿಜ ಸುಜ್ಞಾನದ ಭಿಕ್ಷೆಯು
ಓಡಿತು ಭವ ದುಷ್ಕಾಳವು ಮಾ
ಕೂಡಿತು ಸಮರಸವಾಗಿ ಮಹಿಪತಿ ಜೀವ
ಒಡಿಯನ ಚರಣದಂಗುಷ್ಠದಲಿ ಮಾ ೩

## ೪೮೨

ಲೇಸುಲೇಸಾಯಿತು ಸದ್ಗುರು ಕೃಪೆ
ಲೇಸುಲೇಸಾಯಿತು ಧ್ರುವ

ಆದಿತತ್ವದ ಜ್ಞಾನ ಇದಿರಿಟ್ಟಿತು ಘನ ಲೇಸುಲೇಸಾಯಿತು
ಭೇದಿಸಲು ಮನೆ ಅದೆ ಆಯಿತುನ್ಮನ ೧

ಅನುಭವದ ಖೂನ ತಾನೆ ಆಯಿತು ಘನ
ಲೇಸುಲೇಸಾಯಿತು
ಜ್ಞಾನಾಗಮ್ಯದ ಸ್ಥಾನ ಎನಗಿದೆ ನಿಜ ಧ್ಯಾನ ೨

ಭಾವದ ಬಯಲಾಟ ತಾವದೋರಿತು ನೀಟ ಲೇಸುಲೇಸಾಯಿತು
ಸುವಿದ್ಯ ಗುರುನೋಟ ಸರಿಮಾಡಿತೀ ಮಾಟ ೩

ನೀಡಿದಭಯ ಹಸ್ತ ಮಾಡಿತು ಮನಸ್ವಸ್ಥ
ಗೂಢವಾಗಿಹ್ಯ ವಸ್ತಗೂಡಿತು ಸಾಭ್ಯಸ್ತ ೪

ಇಹಪರಕ ಸ್ವಾದ ಮಹಾಗುರುಪ್ರಸಾದ
ಸಾಹ್ಯಮಾಡುದೆ ಸದಾ ಮಹಿಪತಿ ಗುರುಬೋಧ ೫

## ೪೮೩

ಶರಣು ಶ್ರೀ ಗುರುನಾಥ ಸುರಮುನಿಜನದಾತ
ಮೂರು ಲೋಕೊಂದಿತ ಪರಮ ಹಿತ ೧

ನಿನ್ನುಪಕಾರ ಪೂರ್ಣ ಏನಾದರುತ್ತೀರ್ಣ
ನೀನೆ ದಯಾಕರುಣ ದೀನೋದ್ಧಾರಣ ೨

ಮನದ ಮಂಗಳ ನೀನು ನೆನೆವರ ಕಾಮಧೇನು
ದೀನ ಮಹಿಪತಿಗಿನ್ನು ನೀನೆ ನೀನು ೩

## ೪೮೪

ಶರಣು ಶ್ರೀದೇವದೇವಾದಿ ಸದ್ಗುರುನಾಥ
ಶರಣು ಸುರಮುನಿಜನರ ಪ್ರಾಣ ಜೀವನದಾತ
ಶರಣು ಪರಬ್ರಹ್ಮ ಪರಮಾನಂದ ಭರಿತ
ಶರಣು ಸಿರಿ ಅರಸ ಕರುಣಾಳು ಶ್ರೀನಾಥ ಶರಣು ೧

ವೇದ ಆಗೋಚರಾನಾದಿ ಗುರು ಅನಂತ
ಸಾಧುಜನ ಸಹಕಾರ ಸಂತತ ಸದೋದಿತ
ಸದ್ಬ್ರಹ್ಮ ಆನಂದ ಗುಣತ್ರಯ ವಿರಹಿತ
ಆದಿ ಅನಾದಿ ಅವಿನಾಶ ಗುರುನಾಥ ೨

ಭಕ್ತಜನ ಹೃದಯ ಸಂಜೀವ ಸದ್ಗುರುನಾಥ
ಶಕ್ತನಹುದಖಿಳದೊಳು ಸಕಳಾರ್ಥಪೂರಿತ
ಯುಕ್ತನಹುದಯ್ಯ ಶಕ್ತಿಯು ಗುರುಸಮರ್ಥ
ಮುಕ್ತಿದಾಯಕ ಮಹಿಪತಿ ಪ್ರಾಣನಾಥ ೩

## ೪೮೫

ಶ್ರೀ ಗುರು ಆತ್ಮರಾಮ ಸುರಮುನಿ ಸೇವಿತನಾಮ
ಸಜ್ಜನ ಹೃದಯ ವಿಶ್ರಾಮ ಶ್ರೀಹರಿ ಸರ್ವೋತ್ತಮ ೧

ದೀನೋದ್ಧಾರಣ ರಾಮ ಅನಾಥ ಬಂಧು ನಿಸ್ಸೀಮ
ಅನಂತ ಗುಣಮಹಿಮ ಶ್ರೀನಾಥ ಕಲ್ಪದ್ರುಮ ೨

ಗುರುವರ ಪರಂಧಾಮ ಪತಿತಪಾವನ ನಾಮ
ಮಹಿಪತಿ ತಾರಕರಾಮ ಸದ್ಗತಿಸುಖ ವಿಶ್ರಾಮ ೩

## ೪೮೬

ಶ್ರೀ ಗುರುಕರುಣವು ಸೋಜಿಗವು ಕೌತುಕವು ಧ್ರುವ

ಗುರುಹಸ್ತ ಪರುಷಸದೃಶ ನಿದರುಶದೋರುತಿಹ್ಯ
ಹರುಷ ಅಗಣಿತ ತೇಜೋಮಯ ಪ್ರಕಾಶ ಇದು
ಅನಿಮಿಷ ನೇತ್ರಲಿ ನೋಡುವದು ನೋಡುವದು
ಘನ ಮಹಿಮೆಯೊಳು ಬೆರದಾಡುವದು ಬೆರದಾಡುವದು
ತನ್ನೊಳು ತಾ ನಲಿದಾಡುವದು ನಲಿದಾಡುವದು
ಅನುಭವ ಸುಖ ಸೂರ‍್ಯಾಡಿ ಸದ್ಗತಿ ಮುಕ್ತಿಯನೆ ಪಡೆವದು
ಸದ್ಗುರು ಮಹಿಮೆಯ ನೋಡಿರಯ್ಯ ನೋಡಿರಯ್ಯ
ಶ್ರೀಗುರುದಾಸರು ೧

ಗುರುವುಪದೇಶ ಜ್ಞಾನಪ್ರಕಾಶ ಅತಿಸಂತೋಷ
ಭೇದಿಸುವುದು ಭವಪಾಶ ಇದು ನಿದ್ರಸ್ಯ
ಕರ್ನಲಿ ಕೇಳ್ವದು ನಿದ್ರಸ್ಯ ಕರ್ನಲಿ ಕೇಳ್ವದು
ಲಯ ಲೀಲೆಯೊಳು ಆಲಿಸುವದು ಆಲಿಸುವದು

ಪರಿಪರಿ ಶ್ರುತಿಗ್ಹೇಳೆನಿಸುವದು ಹೇಳೆನಿಸುವದು
ಪತಿತಜೀವನ ಪಾವನಗೈಸುವದು ಸದ್ಗುರು
ಮಹಿಮೆಯ ತಿಳಿಯದು ತಿಳಿಯದೀ ಶ್ರೀಗುರು ದಾಸರು ೨

ಗುರು ನಿಜಬೋಧ ಬಲು ಅಗಾಧ ಪರಮ ಆಹ್ಲಾದ
ತಿಳಿದವ ಜನ್ಮಕ ವಿರಹಿತವಾದ ಇದು
ಸದ್ಭವದಲಿ ಸಾಧಿಸುವದು ಸಾಧಿಸುವದು
ಅತಿಸೂಕ್ಷ್ಮಗತಿ ಭೇದಿಸುವದು ಭೇದಿಸುವದು
ಗುರುಪಾದವೆಗತಿ ನಿಶ್ಚೈಸುವದು ನಿಶ್ಚೈಸುವದು
ಸಮ್ಯಕಜ್ಞಾನವು ಸಾಧಿಸಿ ಆತ್ಮದಿ ಜೀವನ್ಮುಕ್ತನಾಗುವದು
ಸದ್ಗುರು ಪಾದವು ಸಾಧಿಸಿ ಸಾಧಿಸಿ ಶ್ರೀಗುರುದಾಸರು ೩

ಗುರುಕೃಪೆಜ್ಞಾನನ ಅಳಿವುದಜ್ಞಾನ ತಿಳಿವದು ಯಾತನ
ಕಳೆವದು ಜನ್ಮ ಜರಾಮರಣ ಇದು
ಪೂರ್ವ ಕಲ್ಪನೆಯು ಕಲ್ಪನೆಯು
ಆತ್ಮಜ್ಞಾನದ ವರ್ತನೆಯು ವರ್ತನೆಯು
ಸಾಯಸವಳಿದು ಯತ್ನವು ಪ್ರಯತ್ನವು
ಶ್ರೀಗುರು ಭಕ್ತಿಯು ಮಾಡಿರಯ್ಯ
ಮಾಡಿರಯ್ಯ ಸದ್ಗುರುದಾಸರು ೪

ಗುರುಜ್ಞಾನ ದೀಕ್ಷಾ ಕರುಣಾ ಕಟಾಕ್ಷ ಸದ್ಗತಿಮೋಕ್ಷ
ತೋರುತಿಹ್ಯ ಗುರುತಾನೆ ಪ್ರತ್ಯಕ್ಷ ಇದು
ಭಾಸ್ಕರ ಗುರು ಕೃಪಾದೃಷ್ಟಿಯು ಅಮೃತದ ದೃಷ್ಟಿಯು
ಜೀವನ ಸಂತುಷ್ಟಿಯು ಮುರಿಯಿತು
ಮಹಿಪತಿ ಹುಟ್ಟುವ ಹೊಂದುವ ಬಟ್ಟೆಯು
ತ್ರಾಹಿ ತ್ರಾಹಿ ಗುರುನಾಥ ೫

## ೪೮೭

ಶ್ರೀಗುರುಕೃಪೆಯಿಂದ ದಯದಿಂದ
ನೀಗಿದೆ ನಾ ಭವಬಂಧ ೧

ಘನದಯದೊಲವಿಂದ ಒಲವಿಂದ
ತಾನೆ ತಾನಾದ ಮುಕುಂದ ೨

ಸ್ವಹಿತ ಸುಖದಿಂದ ಸುಪಥದಿಂದ
ಮಹಿಪತಿಗಾಯಿತಾನಂದ ೩

## ೪೮೮

ಶ್ರೀಗುರುರಾಯ ನಿಮ್ಮ ಕರುಣಲೆನ್ನ ಹೊರೆವುದು ಧ್ರುವ

ಒಂದು ಅರಸಿ ದ್ವಂದ್ವಹರಿಸಿ ಮೂರು ಹುರಿಸಿ ಮೀರಿ ನಿಲಿಸಿ
ನಾಲ್ಕು ಮರೆಸಿ ಐದು ಜರೆಸಿ ಆರು ತೋರಿಸಿ ಎನ್ನಹೊರೆವುದು ೧

ಏಳು ಅರಸಿ ಎಂಟು ಜರಿಸಿ ಒಂಬತ್ತು ಬಲಿಸಿ ಹತ್ತು ಹರಿಸಿ
ಅರಿಸಿ ಬೆರಿಸಿ ಇರಿಸಿ ನಿಮ್ಮ ಕರುಣಕೃಪೆಯಲೆನ್ನ ಹೊರೆವುದು ೨

ಐದು ಅರಿಸಿ ಐದು ಬೆರಿಸಿ ಐದು ನಿಮ್ಮ ಚರಣಲಿರಿಸಿ
ಸುರಿಸಿ ಕರುಣ ಮಳೆಯಗರಿಸಿ ಮಹಿಪತಿ ಜನ್ಮಹರಿಸಿ ಹೊರೆವುದು ೩

## ೪೮೯

ಶ್ರೀಗುರುವೆ ತಾಯಿ ತಂದೆನಗ ನೀನು ಧ್ರುವ

ತಾಯಿ ತಂದೆನಗ ನೀ ಬಾಹ್ಯಾಂತ್ರ ಪರಿಪೂರ್ಣ
ಸಾಯೋಜ್ಯ ಸದ್ಗುರುನಾಥ ನೀನೆ

ಜೀವ ಸಂಜೀವ ಸಾಕ್ಷಾತ ನೀನೆ
ಕಾವ ಕರುಣಾಳು ವರದಾತ ನೀನೆ
ಇಹಪರದೊಳು ಸಕಳಾರ್ಥ ನೀನೆ ೧

ಕರುಣ ಆನಂದದಲಿ ಹೊರೆದು ಸಲಹುವ ಮೂರ್ತಿ
ಪರಮ ಜೀವದ ಅತಿ ಮೈತ್ರ ನೀನೆ
ಸರ್ವ ಜ್ಞಾನಿಗಳ ಕುಲಗೋತ್ರ ನೀನೆ
ದ್ರವ್ಯ ಧನವನು ಸಂಚಿತಾರ್ಥ ನೀನೆ
ಪೂರ್ವಪ್ರಾಚೀನ ಪುಣ್ಯಸೂತ್ರ ನೀನೆ ೨

ಬಾಲಕನ ಮ್ಯಾಲೆ ದಯಮಾಡಿ ಪಾಲಿಸುತೀಹ್ಯ
ಕುಲಕೋಟಿ ಬಂಧುಬಳಗ ನೀನೆ
ಮೂಲಪುರಷನ ಋಷಿದೈವ ನೀನೆ
ಹಲವು ಪರಿ ಬಲವು ಇಳಯೊಳಗೆ ನೀನೆ
ಸಲಹುತಿಹ ಮಹಿಪತಿಸ್ವಾಮಿ ನೀನೆ ೩

## ೪೯೦

ಶ್ರೀಗುರುವೆ ಶ್ರೀದೇವದತ್ತ ಸದ್ಗುರವೆ ಶ್ರೀದೇವದತ್ತ
ಮಗ್ದುರುವೆ ಶ್ರೀದೇವದತ್ತ ಸದ್ಗತಿಸುಖ ಶ್ರೀದೇವದತ್ತ
ಅನಾಥಬಂದು ದೇವದತ್ತ ದೀನಬಂಧು ದೇವದತ್ತ
ಮುನಿಜನಪಾಲಕ ದೇವದತ್ತ ಘನಮಹಿಮೆಯು ಶ್ರೀದೇವದತ್ತ
ಬಾಹ್ಯಾಂತ್ರವೆ ಶ್ರೀದೇವದತ್ತ ಇಹಪರವೆ ಶ್ರೀದೇವದತ್ತ
ಮಹಿಪತಿಗುರುವೆ ದೇವದತ್ತ ಸಾಕಾರವೆ ಶ್ರೀದೇವದತ್ತ ೧

## ೪೯೧

ಶ್ರೀಗುರು ಸರ್ವೇಶ್ವರ ಸುಗಮ ಪಥ ಸಹಕಾರ
ನಿಗಮಗೋಚರ ನಿರ್ಧಾರ ಜಗದ್ಗುರು ಜಗದಾಧಾರ ೧

ಮುನಿಜನರಿಗೆ ಪರಮಾರ್ಥ ನೀನೆ ಸಕಲ ಹಿತಾರ್ಥ
ಘನ ದಯದಲಿ ಸಮರ್ಥ ಅನುಭವಕೆ ಸುತತ್ವಾರ್ಥ ೨

ಸಾಹ್ಯಸಾನುಕೂಲದಾಗರ ಮಹಿಮೆ ನಿನ್ನದು ಅಪಾರ
ಸ್ವಸುಖದ ಸಾಗರ ಮಹಿಪತಿಯ ಮನೋಹರ ೩

## ೪೯೨

ಶ್ರೀಗುರುಸಾಹ್ಯ ಕಂಡೆ ಕಂಡೆವಯ್ಯ ಪಿಂಡ ಬ್ರಹ್ಮಾಂಡದೊಳು
ಹಿಂಡದೈವದೊಡಿಯ ಪ್ರಚಂಡನ ಕಂಡೆ ಧ್ರುವ

ದೀನಾನಾಥನ ಕಂಡೆ ದಿನೋದ್ಧಾರನ ಕಂಡೆ
ಅನಾಥಜನರ ಪ್ರತಿಪಾಲನ ಕಂಡೆ ೧
ಶರಣರಕ್ಷನ ಕಂಡೆ ವಾರಿಜಾಕ್ಷನ ಕಂಡೆ
ವರಮುನಿಜನರ ಪ್ರತ್ಯಕ್ಷನ ಕಂಡೆ ೨

ಭಕ್ತಪ್ರಿಯರ ಕಂಡೆ ಮುಕ್ತಿ ಈವನ ಕಂಡೆ
ಪತಿತಪಾವನ ಗುರುಸಂಜೀವನ ಕಂಡೆ ೩

ದೇವದೇವನ ಕಂಡೆ ಕಾವ ಕರುಣನ ಕಂಡೆ
ಮಹಿಪತಿ ತಾರಕಗುರುಭವನಾಶನ ಕಂಡೆ ೪

## ೪೯೩

ಶ್ರೀಗುರು ಸೇವೆಯ ಮಾಡಿ ಕರದಲಿ ಪರಬ್ರಹ್ಮದ
ನೆಲೆಯು ನೋಡಿ ಧ್ರುವ

ಕರ್ಮಕ ಮಂದದಿ ಸಿಲುಕಲಿ ಬ್ಯಾಡಿ
ವರ್ಮನರುವ್ಹ ಗುರುಯೋಗ ಧರ್ಮವ ಮಾಡಿ
ನಿರ್ಮನದಲಿ ನಿಜಘನ ಬೆರೆದಾಡಿ
ನಿರ್ಮಳ ನಿಶ್ಚಳ ನಿರ್ಗುಣ ಆತ್ಮನ ಕೂಡಿ ೧

ಅನುದಿನ ಅನುಭವಾಮೃತವನು ಸೂರ್‍ಯಾಡಿ
ತನುಮನಧನ ಶ್ರೀಗುರುವಿನರ್ಪಣೆ ಮಾಡಿ
ಅನುಭವದಲಿ ಆತ್ಮದ ನೆಲೆನಿಭ ನೋಡಿ
ಘನಬ್ರಹ್ಮಾನಂದದ ಸುಖದಲಿ ಲೋಲ್ಯಾಡಿ ೨

ಮಹಾಮಹಿಮನ ಸುಸೇವೆಯ ಮಾಡಿ
ಬಾಹ್ಯಾಂತ್ರವೆ ಭಾಸ್ಕರಮೂರ್ತಿ ಕೊಂಡಾಡಿ
ಮಹಿಪತಿ ಒಡಿಯನ ಶ್ರೀಪಾದವ ನೋಡಿ
ಇಹಪರ ಸಾಯೋಜ್ಯ ಸದ್ಗತಿ ಮುಕ್ತಿಯ ಕೂಡಿ ೩

## ೪೯೪

ಶ್ರೀಗುರು ಸೇವೆಯ ಮಾಡಿ
ಸಾಯೋಜ್ಯ ಸದ್ಗತಿ ಕೂಡಿ ಧ್ರುವ

ಮೂರು ರತ್ನದ ಪ್ರಭೆ ನೋಡಿ
ಮೂರು ವಟ್ಟೆಯಾ ಮುರಿಗೂಡಿ
ಆರು ಸ್ಥಳವ ಮುಟ್ಟಿನೋಡಿ
ಏರಿಸು ಪಥವನು ಕೂಡಿ ೧

ತುಟ್ಟತುದಿಯಲೇರಿ ನೋಡಿ
ಮುಟ್ಟಿ ಚಿದ್ಘನ ಬೆರೆದಾಡಿ
ನಟ್ಟನೆವೆ ಒಡಗೂಡಿ
ಗುಟ್ಟುಗುಹ್ಯ ನಿಜವು ಹೇಳಬ್ಯಾಡಿ ೨

ಮಹಿಪತಿ ನಿನ್ನೊಳು ನೋಡಿ
ಐವರೊಂದಾಗಿನ್ನು ಕೂಡಿ
ಸೇವೆ ಸದ್ಗುರು ಪಾದ ಮಾಡಿ
ಸಾಯೋಜ್ಯ ಪಥ ಬೆರೆದಾಡಿ ೩

## ೪೯೫

ಸಕಲಾಗಮ ಪೂಜಿತ ಏಕೋ ದೇವನೀತ
ಏಕಾಕ್ಷರ ಬ್ರಹ್ಮೀತ ಹಂಸನಾಥ ೧

ರವಿಕೋಟಿ ತೇಜನೀತ ಸಂವಿತ ಸುಖ ಸಾಕ್ಷಾತ
ಪವಿತ್ರ ಪ್ರಣವನೀತ ಹಂಸನಾಥ ೨

ಯತಿ ಮುನಿವಂದಿತ ಪಿತಾಮಹನ ಪಿತ
ಅತಿಶಯಾನಂದನೀತ ಹಂಸನಾಥ ೩

ಸನ್ಮಾತ್ರ ಸದೋದಿತ ಉನ್ಮನ ವಿರಹಿತ
ಚಿನ್ಮಯನಹುದೀತ ಹಂಸನಾಥ ೪

ಮನದಮಂಗಳನೀತ ಅನುದಿನ ಸಾಕ್ಷಾತ
ಘನಗುರು ಶ್ರೀಕಾಂತ ಹಂಸನಾಥ ೫

ವಿಶ್ವ ವ್ಯಾಪಕನೀತ ವಿಶ್ವರೂಪ ನಿರ್ಮಿತ
ವಿಶ್ವಾತ್ಮನಹುದೀತ ಹಂಸನಾಥ ೬

ಇಡದು ತುಂಬಿಹನೀತ ಮೂಢಮಹಿಪತಿ ದಾತ
ಒಡಿಯನಹುದೀತ ಹಂಸನಾಥ ೭

## ೪೯೬

ಸಕಲಾರ್ಥಕಿದೆ ಸುಖ ಸಾಧಿಸಿನ್ನು ನೋಡಿ
ಭಕುತಿ ಭಾವದಿಂದ ಸದ್ಗುರು ಸೇವೆಯ ಪೂರ್ಣಮಾಡಿ ಧ್ರುವ

ಭಾವವಿಟ್ಟು ನೋಡಿ ಖೂನ ದೇವದೇವೇಶನ
ಕಾವ ಕರುಣನೇ ತೋರುತಿಹ್ಯ ತಾ ನಿಧಾನ ೧

ನೋಟ ನಿಜಮಾಡಿ ನೋಡಿ ನೀಟ ನಿಜ ಧ್ಯಾನ
ಘಾಟ ತಿಳಿದವರಿಗಿದೆ ಗುರುಕೃಪೆಜ್ಞಾನ ೨

ಸವಿದುಣ್ಣಬೇಕು ಇದೇ ಸವಿ ಸವಿಯಿಂದ
ಆವಾಗ ಮಹಿಪತಿಗಿದೆ ನೋಡಿ ಬ್ರಹ್ಮಾನಂದ ೩

## ೪೯೭

ಸತತ ಸದಮಲ ಪತಿತಪಾವನ
ಅತೀತಗುಣತ್ರಯಾನಂದನ
ಶ್ರುತಿಗಗೋಚರ ಯತಿಜನಾಶ್ರಯ
ಅತಿಶಯಾನಂದಾತ್ಮನ ಭಜಿಸು ಮನವೆ ಧ್ರುವ

ಪವಿತ್ರಪ್ರಣವ ಸುವಿದ್ಯದಾಗರ ವ್ಯಕ್ತಗುಣ ಅವಿನಾಶನ
ಘವಿಘವಿಸುವಾನಂದಮಯ ರವಿಕೋಟಿ ತೇಜಪ್ರಕಾಶನ
ಭವರಹಿತ ಗೋವಿಂದ ಗುರುಪಾವನ ಪರುಮಪುರುಷನ
ಭುವನತ್ರಯಲಿಹ್ಯ ಭಾವಭೋಕ್ತ ಸಾವಿರನಾಮ ಸರ್ವೇಶನ ೧

ಮೂಜಗದಿ ರಾಜಿಸುತಿಹ್ಯ ತೇಜೋಮಯ ಘನಸಾಂದ್ರನ
ಅಜಸುರೇಂದ್ರ ಸುಪೂಜಿತನುದಿನ ರಾಜಮಹಾರಾಜೇಂದ್ರನ
ಸುಜನ ಹೃದಯಾನಂದ ನಿಜಸುಜ್ಞಾನಾಮೃತ ಸಮುದ್ರನ
ಭಜಕ ಭಯಹರ ನಿಜ ಘನಾತ್ಮಗಜವರದ ಉಪೇಂದ್ರನ ೨

ಪರಾತ್ಪರ ಪರಿಪೂರ್ಣ ಪರಂಜ್ಯೋತಿ ಘನಸ್ವರೂಪನ
ಪರಂಬ್ರಹ್ಮ ಪರೇಶ ಸುರವರನಾಥ ಗುರುಕುಲದೀಪನ
ನಿರಾಳ ನಿರ್ವಿಶೇಷ ನಿರಾಕಾರ ನಿರ್ವಿಕಲ್ಪನ
ಕರುಣದಿಂದಲಿ ಹೊರೆವ ಮಹಿಪತಿಸ್ವಾಮಿ ಚಿತ್ಸ್ವರೂಪನ ೩

## ೪೯೮

ಸದ್ಗುರುವಿನ ಕೃಪೆ ಸದ್ಗತಿ ಸುಖದೋರಿತು ಧ್ರುವ

ಮಸ್ತಕದ ಮ್ಯಾಲೆ ಅಭಯ ಹಸ್ತ ತಾವಿಡಲಿಕ್ಕೆ
ಸ್ವಸ್ತಹೊಂದಿತು ಮನವು ವಸ್ತುದ ಸುಳವಿಲೆ ೧
ಕರುಣಿಸಿ ನೋಡಲಿಕ್ಕೆ ಕರಗಿಹೋಯಿತು ಮಹಾಪಾಪ
ಸೆರಗು ಸಿಲುಕಿತು ಸುಪಥ ಪರಮಾನಂದದ ೨

ಹರುಷಾನಂದವಾಯಿತು ತರಳ ಮಹಿಪತಿಗೆ
ಗುರುನಾಮಾಮೃತ ಸೇವಿಸಿ ವರಕೃಪೆಯಿಂದ ೩

## ೪೯೯

ಸದ್ಗುರುನಾಥ ಸಾಧುಸೇವಿತ ಸದ್ಭಾವನೆ
ಭೋಕ್ತಸದ್ಗೈಸೋ ಅವಧೂತ ಧ್ರುವ

ಕಾಣಿಸಿ ಖೂನ ಮನದೊಳು ಪೂರ್ಣ
ಅನುಭವ ಬೀರೋ ನಿಧಾನ
ಅನಾಥ ಬಂಧು ದೀನೋದ್ಧಾರಣ ಅನುದಿನ ಕಾಯೋ ಕರುಣ ೧

ಪತಿತಪಾವನನೆಂದೊಡಿಯ ನಾ ಬಂದೆ
ಅತಿಹರುಷದಲಿಡೋ ತಂದೆ
ಸ್ತುತಿಗೋಚರ ಸದ್ವಸ್ತು ನೀ ಬಂದೆ ಸತತ
ಸುಖದಾಯಕ ನೀನೆಂದೆ 2

ಅರುಹು ಕುರುಹು ಆಗುವ ಮನೆಮೂರ್ತಿದೋರೋ
ಶ್ರೀಗುರುವರಮೂರ್ತಿ
ಶರಣಜನರಿಗೇನ ಅಹುದೋ ನಿಸ್ವಾರ್ಥಿ ಸ್ಮರಿಸುವ ನಾಮ
ನಿಮ್ಮ ಕೀರ್ತಿ 3

ಹಿಡಿಯಲವನಿವನೆಂದು ಸುಗುಣ ನೋಡದಿರೆನ್ನವಗುಣ
ಮಾಡಲಿಕ್ಕೆನ್ನ ಪುನೀತನ ಒಡಯನಹುದೋ ನೀ ಪೂರ್ಣ 4

ಬಾಲಕ ನಿಜ ನಿಮ್ಮಿಂದ ಮಹಿಪತಿಯ ಪಾಲಿಸಬೇಕು ಸುದಯಾ
ನೆಲೆನಿಭದೋರಿ ಸದ್ಭಾನ ಭಕುತಿಯ
ಸಲಹೊ ಸದ್ಗುರು ನಮ್ಮಯ್ಯ 5

## 500

ಸದ್ಗುರು ಭಕ್ತಿ ಲೇಸು ಲೇಸು
ಸದ್ಭಕ್ತಿಗೊಂದು ಗುರುಕೃಪೆಯೆ ಲೇಸು ಧ್ರುವ

ಒಂದೆ ಸುಪಥ ಲೇಸು
ಹೊಂದಿ ಬಾಳುವದು ಲೇಸು
ಇಂದಿರೇಶನ ಪಾದ ಕಾಂಬುವದೆ ಲೇಸು 1

ನಡೆ ನುಡಿ ಒಂದೆ ಲೇಸು
ದೃಢಭಾವನೆಯು ಲೇಸು
ಪಿಡಿಯುವನು ಸಂಧಾನಧ್ಯಾತ್ಮದ ಲೇಸು 2

ಗುರುದೈವೆಂಬುದೆ ಲೇಸು
ಅರಿತು ಬೆರೆವುದು ಲೇಸು
ಸರಕ್ಕನೆ ಸಾಧಿಸಿಕೊಂಬಾನುಭವ ಲೇಸು ೩

ಒಳಮುಖನಾಗುವದೆ ಲೇಸು
ತಿಳಿಯುವಾತನ ಮನ ಲೇಸು
ಬೆಳಗಿನೊಳಿಹ್ಯ ಬೆಳಗು ಹೊಳೆವ ಲೇಸು ೪

ತನ್ನ ತಾ ತಿಳಿವದೆ ಲೇಸು
ಉನ್ಮನವಾಗುದೆ ಲೇಸು
ಚೆನ್ನಾಗಿ ಸದ್ಗುರು ಪಾದ ನಂಬುದೆ ಲೇಸು ೫

ಅರ್ತರೆ ಗುರುವಾಕ್ಯ ಲೇಸು
ಬೆರ್ತರೆ ಗುರುಪಾದ ಲೇಸು
ನಿರ್ತದಿಂದಾಗುವ ಪೂರ್ಣ ಗುರ್ತವೆ ಲೇಸು ೬

ಗುರುಶರಣ್ಹೋಗುದೇ ಲೇಸು
ಕರುಣ ಪಡೆವದೆ ಲೇಸು
ತರಳ ಮಹಿಪತಿಗಿದೆ ಸುಖವೆ ಲೇಸು ೭

## ೫೦೧

ಸದ್ಗುರುವಿನ ಕೈಯ ಸದ್ಗೈಸಿಕೊಂಡವಗೆ ಜಯ ಧ್ರುವ

ಭಾವ ಬಲಿದು ಶುದ್ಧ ಪವಿತ್ರವಾದ ಪ್ರಬುದ್ಧ
ಅವ ನೋಡಿ ತಾ ಸ್ವತ: ಸಿದ್ಧ ಭವದಾಟಿದ್ದ ೧

ಸದ್ಗುರು ಸುದಯದೀಕ್ಷ ಸಾಧಿಸಿತವಗೆ ಲಕ್ಷ
ಮೇದಿನಿಯೊಳಗೆ ಸುಭಿಕ್ಷ ಬೋಧಕ ಸುಪಕ್ಷ		೨

ಸದ್ಗತಿ ಸುಖಸ್ವಾದ ಸಾಧಿಸಿ ಮಹಿಪತಿ ಬೋಧ
ಹೊಂದಿ ತೋರಿತು ಸೌಖ್ಯದ ಸದ್ಗುರು ಪ್ರಸಾದ		೩

## ೫೦೨

ಸ್ಮರಿಸಿರೋ ಗುರು ಏಕಶಾಂತನ ಹರಿಹರ ಬ್ರಹ್ಮಗುರು
ಸರ್ವೋತ್ತಮನ
ಪರಮ ಪುರುಷ ಪರಮಾತ್ಮನ ವರ ಶಿರೋಮಣಿ
ಪುರುಷೋತ್ತಮನ		೧

ನೀರೊಳೀಸಿದ ಮಹಾಧೀರನ ಭಾರವ
ಬೆನ್ನಿಲಿಪೊತ್ತ ಗಂಭೀರನ
ಧರೆಯ ಗೆಲಿದ ಮಹಾಶೂರನ ವರವಿತ್ತ ಉಗ್ರಾವತಾರನ		೨

ಧರೆಯ ಬೇಡಿದ ಬ್ರಾಹ್ಮಣೋತ್ತಮನ ಪರಶುಪಿಡಿದ ಪರಾಕ್ರಮನ
ಸ್ಥಿರ ಪದವಿತ್ತ ದೇವೋತ್ತಮನ ಗಿರಿಯನೆತ್ತಿದ ಮಹಾಮಹಿಮನ		೩

ತ್ರಿಪುರವ ಗುಪಿತ ಪೊಕ್ಕಿದ್ದನ ಅಪರಂಪಾರ ಮಹಿಮಾನಂದನ
ಒಪ್ಪುವ ತೇಜಿನೇರಿದ್ದನ ಕಪಟನಾಟಕ ಪ್ರಸಿದ್ಧನ		೪

ಭಕ್ತವತ್ಸಲ ಭವನಾಶನ ಮುಕ್ತಿದಾಯಕ ದೇವ ದೇವೇಶನ
ಮಹಿಪತಿ ಆತ್ಮ ಪ್ರಾಣೇಶನ ಗುರು ಭಾನುಕೋಟಿ ಪ್ರಕಾಶನ		೫

## ೩೦೩

ಸಾಧಿಸಿ ಗುರುಗುಟ್ಟು ಭೇದಿಸಿ ಮನವಿಟ್ಟು ವೇದಕೆ ನಿಲುಕದ
ಹಾದಿಯದೋರುವ ಸದ್ಗುರು ದಯಗೊಟ್ಟು ಧ್ರುವ

ಮಾತಿಲೆ ಆಡುವ ಜ್ಞಾನ ಯಾತಕ ಬಾಹುದೇನ
ಆತ್ಮಕದೋರುವ ನಿಜಖೂನ ಪ್ರತ್ಯೇಕವಾದ ಸ್ಥಾನ ೧

ಮಾತೆ ಆಗೇದ ಮುಂದೆ ರೀತ್ಯಡಗೇದ ಹಿಂದೆ
ನೀತಿಯ ತೋರುವ ಗುರುತಂದೆ ಜ್ಯೋತಿಸ್ವರೂಪೊಂದೆ ೨

ತಾಯಿತವಾಗೆದ ಗುಟ್ಟು ಧ್ಯಾಯಿಸಿ ರೀತಿ ಇಟ್ಟು
ಆಯಿತು ನಿಜಗುಣ ಬಿಟ್ಟು ಹೋಯಿತು ಜನ ಕೆಟ್ಟು ೩
ಗುಟ್ಟು ಕೇಳಿ ಪೂರ್ಣ ಮುಟ್ಟಿ ಮಾಡಿ ಮನ
ಇಟ್ಟುಕೋ ಮಹಿಪತಿಗುರುಬೋಧ ನಿಜಧನ ೪

## ೩೦೪

ಸಾಧಿಸಿದೇ ಖೂನ ಸದಾಸದ್ಗುರು ಕೃಪೆ ಜ್ಞಾನ
ಭೇದಿಸಲನುಮಾನ ಶೋಧಿಸ್ಯನುದಿನ
ಭೇದಿಸಿ ನೋಡಿ ಸದೋದಿತಾತ್ಮಜ್ಞಾನ ೧

ಹೇಳಿ ಕುಡುವದಲ್ಲ ಕೇಳಿ ಕೊಂಬುವುದಲ್ಲ
ಹೇಳುವ ಮಾತಿನೊಳಿಲ್ಲ ಕೇಳುವ ಕಿವಿಯೊಳಿಲ್ಲ
ತಿಳಿವಿನೊಳಿಹ ನಿಜಗುಟ್ಟು ತಿಳಿದವಬಲ್ಲ ೨

ಸೋಹ್ಯ ಸೂತ್ರದ ಖೂನ ದೇಹಾತೀತನು ಬಲ್ಲನೆ ಪೂರ್ಣ
ಗುಹ್ಯ ಗೊಪ್ಪದ ಧನ ಮಹಾನುಭವದ ಸ್ಥಾನ
ಮಹಿಪತಿ ಮನೋನ್ಮನಲೀಯ ನಿಧಾನ ೩

## ೫೦೫

ಸಾಧಿಸಿದೇ ನೋಡಿ ಪೂರ್ಣ ಆದಿ ತತ್ವದ ಸುಸ್ಥಾನ
ಭೇದಿಸುವದನುದಿನ ಸದಾನಂದ ಗುರುಜ್ಞಾನ ಧ್ರುವ

ಮಾತಿನಂತಲ್ಲವಿದು ಸ್ವಾತ್ಮಸುಖದ ಸಾಧನ
ಶ್ರುತಿಗಗೋಚರ ನೋಡಿ ಪ್ರತ್ಯೇಕದನುಸಂಧಾನ
ಅತಿಗುಹ್ಯಗೂಢವಿದು ಹಿತೋಪಾಯದ ಖೂನ
ರತಿಗೊಟ್ಟುನೋಡಿ ಪ್ರತ್ಯಕ್ಷ ಇಷ್ಟ ನಿಧಾನ ೧

ನಡಿನೋಟ ನೀಟಮಾಡಿ ಪಡಕೊಳ್ಳದೆ ಸ್ವಹಿತ
ನುಡಿಆಟದೋರಬ್ಯಾಡಿ ಕೂಡಿ ಸುಜ್ಞಾನಸನ್ಮತ
ಬಡಬ್ಯಾಡಿ ನಾನಾಶ್ರಮವಿಡಿಯದೆ ಸುಗಮ ತಾ
ಇಡಿದು ತುಂಬೇದ ಸಾಂದ್ರ ನೋಡಿ ಅನಂದೋಭರಿತ ೨

ಸಾಧನಕಿದೇ ಮುಖ್ಯ ಸಾಧಿಸಿದೆ ಗುರುದಯ
ಇದಕಿಲ್ಲಿನ್ನೊಂದಧಿಕ ಬುಧಜನರ ಉಪಾಯ
ಅದರಿಂದೊಲುವ ತಾನು ಸದ್ಗುರು ಭಾನುಕೋಟ್ಯುದಯ
ಸದ್ಗೈಸಿ ಮಹಿಪತಿಯ ಸದೋದಿತ ಉದಯ ೩

## ೫೦೬

ಸಾಧಿಸಿನ್ನು ನೋಡಿ ಸದ್ಗುರು ಪಾದ ಕೂಡಿ
ಸಾಧು ಸಂಗ ಮಾಡಿ ಭೇದಾಭೇದೀಡ್ಯಾಡಿ ಧ್ರುವ

ಮರಹು ಮರಿಯ ನೀಗಿ ಅರವ್ಹಿನೊಳಗಾಗಿ
ಕುರುಹದೋರಿಕೊಡುವ ಗುರು ಬ್ರಹ್ಮಾನಂದಯೋಗಿ ೧

ತಿರುಗಿನೋಡಿ ನಿಮ್ಮ ಅರಿತು ನಿಜವರ್ಮ
ಪಾರಗೆಲಿಸುವದಿದು ಗುರುಪಾದ ಧರ್ಮ ೨

ಕಣ್ದೆರೆದು ನೋಡಿ ತನ್ನೊಳು ಬೆರೆದಾಡಿ
ಧನ್ಯವಾದ ಮಹಿಪತಿ ಗುರುಪಾದ ಕೂಡಿ ೩

## ೫೦೭

ಸಾಧಿಸಿ ನೋಡಿ ನಿಜ ಖೂನ
ಸದ್ಗುರು ಕೃಪೆಯಿಂದ ಸ್ವಸುಖದ ನಿಧಾನ ಧ್ರುವ

ಸಹಜಾವಸ್ಥೆಗೆ ಬಂದು ನೋಡಿ
ಸಹಜ ಸದ್ವಸ್ತು ಬಾಹುದು ತಾನೆ ಕೈಗೂಡಿ
ದೇಹ ದಂಡನೆಂಬುದು ಬ್ಯಾಡಿ
ಸಾಹ್ಯಮಾಡುವ ಗುರುಸೇವೆ ಪೂರ್ಣಮಾಡಿ ೧

ಸಾಧನವೆಂಬುದೆ ಸಾಕ್ಷೇಪ
ಭೇದಿಸಿ ನೋಡಲಿಕ್ಕಿದುವೆ ವಸ್ತು ತಾಂ ಸಮೀಪ
ಆದಿ ಅನಾದಿ ಸ್ವರೂಪ
ಸಾಧಿಸಿದವನೆ ತಾ ಮೂರುಲೋಕ ಆಪ ೨

ಎಲ್ಲಕ್ಕೆ ಮೇಲು ಗುರುಭಕ್ತಿ
ಅಲ್ಲೆಸಲ್ಲದು ಮತ್ತೆ ಮುಂದೆ ಬೇಕೆಂಬ ಉಕ್ತಿ
ಇಲ್ಲೆ ತಿಳಿಕೋ ನೀ ಮಹಿಪತಿ
ಸುಲಭದಿಂದ ಸಾಧಿಸಿಕೊಂಡು ನಿಜಯುಕ್ತಿ ೩

## ೫೦೮

ಸಾಧಿಸಿ ನೋಡಿ ಸುಖ ಭೇದಿಸ್ಯನುದಿನ
ಬೋಧ ನಿಜವಾದ ಸದೋದಿತ ಗುರು ಜ್ಞಾನ ಧ್ರುವ

ಭಾವನೆ ನೆಲೆಗೊಂಡು ನಿಮ್ಮ ಭಕ್ತಿ ನಿಜ ಮಾಡಿ
ದೈವ ಪ್ರಗಟಾಗಿ ಒಲಿವದು ನಿಜನೋಡಿ ೧

ಸ್ವಸ್ತ ಮನವಾಗಲಿಕ್ಕೆ ವಸ್ತು ಅಲ್ಲೆ ನೋಡಿ
ಅಸ್ತ ಉದಯವಿಲ್ಲದೆ ಸಾಭ್ಯಸ್ತ ನಿಜಗೂಡಿ ೨

ಲೇಸು ಲೇಸಾಯಿತು ನೋಡಿ ಭಾಸುತೀಹ್ಯಸುಖ
ದಾಸ ಮಹಿಪತಿಗಿದೆ ನೋಡಿ ಗುರು ಮುಖ ೩

## ೫೦೯

ಸಾವಧಾನವಾಗಿ ನೋಡೋ ಸ್ವಾಮಿ ಸದ್ಗುರು ಶ್ರೀಪಾದ
ಭಾವ ಭಕ್ತಿಯಿಂದ ಬೆರೆಯೊ ನೀನು ಬ್ರಹ್ಮಾನಂದ ಬೋಧ ಧ್ರುವ

ತಿರುಗಿ ನೋಡೋ ನಿನ್ನ ನೀನು ಅರಿತು ಸ್ವಾನುಭವದಿಂದ
ಕರಗಿ ಮನ ನೋಡಿ ನಿಜದೋರುತದೆ ಬ್ರಹ್ಮಾನಂದ
ಸೆರಗವಿಡಿದು ಸೇರು ಬ್ಯಾಗೆ ಗುರುಕರುಣ ಕೃಪೆಯಿಂದ
ಪರಮ ಸುಪಥವಿದೆ ವರಮುನಿಗಳಾನಂದ ೧

ಹಚ್ಚಿ ನಿಜಧ್ಯಾಸವಂದು ಕಚ್ಚಿಕೊಂಡಿರೋ ಸುಹಾಸ
ಮುಚ್ಚಿಕೊಂಡು ಮುಕ್ತಿ ಮಾರ್ಗ ನೆಚ್ಚಿರೋ ನಿಜಪ್ರಕಾಶ
ಹುಚ್ಚುಗೊಂಡು ಹರಿಯ ರೂಪ ಅಚ್ಚರಿಸೋ ನಿರಾಶ
ಎಚ್ಚತ್ತು ನಿನ್ನೊಳಗೆ ಬೆರೆಯೋ ಘನಸಮರಸ ೨

ಸಾವಧಾನವೆಂದು ಶ್ರುತಿ ಸಾರುತದೆ ತಾ ಪೂರ್ಣ
ಸುವಿದ್ಯ ಸುಖವಿದು ಸಾಧಿಸು ಅನುದಿನ
ಪಾವನ್ನಗೈಸುದಿದೆ ಮಹಿಪತಿ ಜೀವಪ್ರಾಣ
ಭಾವ ಬಲಿದು ನೋಡಲಿಕೆ ದೋರುತದೊ ನಿಧಾನ ೩

## ೫೧೦

ಸ್ವಾಮಿ ನಮ್ಮ ದೇವದತ್ತ ಬ್ರಹ್ಮಾನಂದ ಅವಧೂತ
ಸಮಸ್ತಜನದಾತ ಬ್ರಹ್ಮಾದಿಗಳೊಂದಿತ ಧ್ರುವ

ಕುಡಲಿಕ್ಕೆ ತಾ ಉದಾರಿ ಬಲು ದೊಡ್ಡ ಉಪಕಾರಿ
ಕಡೆಗಾಣಿಸುವ ಧೊರಿ ನಿಜ ನೀಡುತಿಹ್ಯ ಸಾರಿ
ಬಡವರಿಗೆ ಆಧಾರಿ ಭಕ್ತಜನ ಸಹಕಾರಿ
ಬೇಡುವದೊಂದೇ ಪರಿ ಮಾಡುತಿಹ್ಯ ಮನೋಹರಿ ೧

ಬೀರುತಿಹ್ಯ ನಿಜನೋಡಿ ಕರದಲ್ಲಭಯ ನೀಡಿ
ಗುರುತಿಟ್ಟಿದೆ ಸೂರ್ಯಾಡಿ ಶರಣರು ನಿಜಗೂಡಿ
ಅರುವ್ಹೆ ಅಂಜನ ಮಾಡಿ ಕುರುವ್ಹೆದೋರುದಿದರಡಿ
ಧರೆಯೊಳಿದೆ ಕೊಂಡಾಡಿ ಗುರುನಾಥನೆಂದು ಪಾಡಿ ೨

ಅನಾಥ ಬಂಧುನೀತ ದೀನದಯಾಳು ಸಾಕ್ಷಾತ
ಅನುದಿನದೆ ಪ್ರಖ್ಯಾತ ಘನಗುರು ಶ್ರೀನಾಥ
ಮನೋಭಾವ ಪೂರಿತ ಎನಗುಳ್ಳ ದೇವದತ್ತ
ದೀನ ಮಹಿಪತಿ ದಾತ ಭಾನುಕೋಟಿ ಉದಿತ ೩

## ೫೧೧

ಸ್ವಾಮಿ ಶ್ರೀಗುರುವಿರಲಿಕ್ಕೆ ಸಾಯಸವೆನಗಿನ್ಯಾಕೆ
ಗುರುನಾಮ ನಿಧಾನಿರಲಿಕ್ಕೆ ನನಗಿಲ್ಲೆಂಬುವದ್ಯಾಕೆ ಧ್ರುವ

ಅನಾಥ ಬಂಧು ಅನುದಿನ ಎನಗಿರೆ ಅನುಕೂಲದ ಚಿಂತ್ಯಾಕೆ
ತನುಮನದೊಳು ತಾನೆತಾನಿರಲು ಅನುಮಾನಿಸಲಿನ್ಯಾಕೆ ೧

ದಾತನೊಬ್ಬ ಶ್ರೀನಾಥೆನಗಿರಲು ಯಾತಕೆ ಪರರ ದುರಾಸೆ
ಮಾತುಮಾತಿಗೆ ತೋರುವ ಸದ್ಗುರು ತೇಜೋಪುಣ್ಯದ ರಾಶಿ ೨

ಲೇಸಾಗೆನಗಿರೆ ಭಾಸ್ಕರ ಗುರುದಯೆ ವೇಷದೋರುವದಿನ್ಯಾಕೆ
ದಾಸ ಮಹಿಪತಿಗ್ಯನುದಿನ ಭಾಸುತಲಿರೆ ಕಾಸಿನ ಕಳವಳಿಕ್ಯಾಕೆ ೩

## ೫೧೨

ಸ್ವಾಮಿ ಸಗುಣ ನಿರ್ಗುಣ ಬಾರಯ್ಯ
ಬ್ರಹ್ಮಾನಂದ ಸುಖವು ದೋರಯ್ಯ ಧ್ರುವ

ಕಣ್ಣು ಬಡೆಯುತದೆ ನಿಮ್ಮ ನೋಡೇನೆಂದು
ಪುಣ್ಯಚರಣ ಸುಪ್ರಭೆದೋರೋ ನೀ ಬಂದು
ಧನ್ಯಧನ್ಯಗೈಸುವದೋ ಕೃಪಾಸಿಂಧು
ಎನ್ನೊಡೆಯ ನೀನಹುದೋ ದೀನಬಂಧು ೧

ಅನುದಿನ ಸುಸೇವೆ ನಿಮ್ಮ ಮಾಡೇನೋ
ಕ್ಷಣಕ್ಕೊಮ್ಮೆ ಸ್ವರೂಪ ನಾನೋಡೇನೋ
ಘನ ಸುಖದೊಳು ನಾ ಬೆರೆದಾಡೇನೋ
ನೆನೆವಂಥ ದಾಸರ ನಿಮ್ಮ ಕೂಡೇನೋ ೨

ಹೃದಯದೊಳು ನಿಜವಾಗಬೇಕಿಗ
ಸದಾಸರ್ವದಾ ಮಾಡೋ ಏನ್ನೊಳೀಪ್ವಾಂಗ
ಪಾದಪದ್ಮಕ್ಯೋಗ್ಯ ಮಾಡೋ ಮಹಿಪತಿಗೆ
ಇದೆ ಪುಣ್ಯ ನೋಡಯ್ಯ ಕುಲಕೋಟಿಗೆ ೩

## ೫೧೩

ಸ್ವಾಮಿ ಸದ್ಗುರು ಘನಕೃಪೆಮಾಡೋ ನಿಮ್ಮ
ಕರುಣಲೆನ್ನ ನೋಡೋ
ಒಮ್ಮೆ ಶಿರದಲಭಯ ಪೂರ್ಣನೀಡೋ
ಬ್ರಹ್ಮಾನಂದಸುಖದೊಳಗಿಡೋ ೧

ಬಲು ಸೋಸಿದೆ ಜನ್ಮ ನಾ ಬಹಳ ಚಾಲವರಿದು
ತಾಳಿದೆ ಕ್ರಿಮಿಕುಲ
ನಿಲುಕಡೆ ಹೊಂದಲಿಲ್ಲೊಂದು ಸ್ಥಳ ಪಾಲಿಸಿನ್ನಾರೆ
ನೀ ದಯಾಳ ೨

ಹೇಳಬೇಕು ದುಃಖಾರಿನ್ನ ಮುಂದೆ ತೊಳಲಿ ಬಳಲಿ
ಜನ್ಮದಿ ನೊಂದು ಬಂದೆ
ತಿಳಿಯಲಿಲ್ಲವೋ ನಿಜ ಅಂದಿಗಿಂದೆ ಸುಳಹುದೋರೋ
ಇನ್ನಾದರೆ ತಂದೆ ೩

ತಪ್ಪು ಕ್ಷಮೆಯ ಮಾಡೋ ಸ್ವಾಮಿ ನಮ್ಮ ಪಾಪಿ
ದುರಾಚಾರಿಯು ನಾ ಪರಮ
ತಾಪತ್ರಯ ಖಂಡಿಸುವ ದಯ ನಿಮ್ಮ ಕೃಪೆಯುಳ್ಳ
ನೀ ಘನಮಹಿಮ ೪

ಕೊಡುಯೆನಗೆ ಸಜ್ಜನರ ಸಹವಾಸ ಅಡಿಗಡಿಗೆ
ಹೊರಿಯೋ ಸರ್ವೇಶ
ನೀಡೋ ನಿಮ್ಮ ಜ್ಞಾನುಪದೇಶ ಮಾಡೋ ಮಹಿಪತಿ
ಭವಭಯನಾಶ ೫

## ೫೧೪

ಸ್ವಾಮಿ ಸದ್ಗುರುದಯವೆ ತಾ ನಿಜ
ನೇಮ ಕರಿಗಿದೇವೆ ಹಿತಗುಜ
ಸಮಸ್ತ ಜನರಿಗಿದೆ ಸುಬೀಜ
ಪ್ರೇಮವಿಟ್ಟವರಿಗ್ಹೊಳೆವದು ಸಹಜ ೧

ಗುರು ಉಪಾಸನೆ ಎಲ್ಲಕೆ ಮೇಲು
ಸುರಜನರಿಗಿದೊಂದೇ ಕೀಲು
ಅರಿತವರಿಗೆ ಮುಕ್ತಿ ಬಾಗಿಲು
ತ್ಯರ ತಿಳಿಯದವರಿಗಿದೇ ಸೋಲು ೨

ನಂಬಿ ನಡೆಯಬೇಕು ಸದ್ಗುರುಪಾದ
ಇಂದುದೋರಿಕೊಡುವದು ಸುಬೋಧ
ಗುಂಭಗುರುತಾಗಿದೋರುದು ಸ್ವಾದ
ಹಂಬಲಿಸಿಕೊಳಬೇಕು ಸುಪ್ರಸಾದ ೩

ಗುರುಮಾರ್ಗವೆಂಬುದೆ ಸಾಕ್ಷಾತ್ಕಾರ
ಸೂರೆಗೊಂಡು ಮ್ಯಾಲೆ ಸುಖಸಾಗರ
ಮರುಳ ಬಲ್ಲವೇನಿದರ ವಿಚಾರ
ಶರಣಜನರಿಗಿದೇ ಸಹಕಾರ ೪

ಗುರುಕೃಪೆಯಾದವಗೆ ಪ್ರಾಂಜಳ
ಸಾರಾಯ ಕೊಂಬುವನೆ ತಾ ವಿರಳ
ಅರಿಯೋ ಮಹಿಪತಿ ನಿನ್ನೊಳು ಸಕಳ
ಹರುಷವಾಗೆದಿಂತು ಈ ಸುಖಕಲ್ಲೋಳ ೫

## ೫೧೫

ಸ್ವಾಮಿ ಸದ್ಗುರುವೆ ನಿಮ್ಮ ದಯದಕ್ಷಿ ಸುಭಿಕ್ಷ ಧ್ರುವ

ನಿಮ್ಮ ಅಭಯ ಹಸ್ತ ಬ್ರಹ್ಮಾನಂದದ ಸುಪ್ರಸ್ತ
ನಮ್ಮ ಜೀವಕೆ ಪ್ರಶಸ್ತ ನಿಮ್ಮಿಂದೆ ಸ್ವಸ್ತ ೧

ನಿಮ್ಮ ದಯಕರುಣ ಸಮ್ಯಜ್ಞಾನದ ಸ್ಫುರಣ
ನಮ್ಮ ಜನ್ಮದುದ್ಧರಣ ನಿಮ್ಮಿಂದ ಪೂರ್ಣ ೨

ಸಾಹ್ಯಮಾಡುವ ನಿಮ್ಮ ಬಾಹ್ಯಾಂತ್ರದಲಿ ಸಂಭ್ರಮ
ಮಹಿಪತಿಗಾನಂದೋ ಬ್ರಹ್ಮ ಇಹಪರ ಸುಪ್ರೇಮ ೩

## ೫೧೬

ಸ್ವಾಮಿ ಸದ್ಗುರುವೆ ನಿಮ್ಮ ಪಾದಕಮಲಕೆರಗುವೆ ಧ್ರುವ

ಹಿಂಡುದೈವಕೆ ಪ್ರಚಂಡಮೂರ್ತಿ
ಕೊಂಡಾಡುವ ನಿಮ್ಮ ಅಖಂಡ ಕೀರ್ತಿ ೧

ಭಾವಭೋಕ್ತ ದೇವೋತ್ತಮ
ಸೇವಿಸುವೆ ನಿಮ್ಮ ದಿವ್ಯನಾಮ ೨

ಜಯ ಜಯ ಆನಂದ ಕಂದ
ಧ್ಯಾಯಿಸುವೆ ನಿಮ್ಮ ಪಾದಾರವಿಂದ ೩

ದಯಾಸಿಂಧು ದೇವ ದೇವ
ಕಾಯೋ ಮಹಿಪತಿ ಪ್ರಾಣಜೀವ ೪

## ೫೧೭

ಸಿಕ್ಕಬೇಕು ಗುರುಪಾದ ಸಿಕ್ಕಬೇಕು
ಸಿಕ್ಕಿದ ಬಳಿಕಲಿ ದಕ್ಕಬೇಕು ೧

ಮುಕ್ಕಬೇಕು ಗುರು ನಾ ಮುಕ್ಕಬೇಕು
ಮುಕ್ಕಿದ ಬಳಿಕಲಿ ಅಕ್ಕಬೇಕು ೨

ಉಕ್ಕಬೇಕು ಘನಸ್ಫುರಣ ಉಕ್ಕಬೇಕು
ಉಕ್ಕಲು ಮಹಿಪತಿಗುಕ್ಕಬೇಕು ೩

## ೫೧೮

ಸಿದ್ಧ ಇದೆ ನೋಡಿ ಸದ್ಗುರು ಪಾದ ಕೂಡಿ ಧ್ರುವ

ವಾದ ಮಾಡಬ್ಯಾಡಿ ಸದ್ಬೋಧ ಇದೆ ನೋಡಿ
ಭೇದ ಬುದ್ಧೀ ಡ್ಯಾಡಿ ಹಾದಿ ಇದೆ ಕೂಡಿ ೧

ನಂಬಿ ಗುರುಪಾದ ಇಂಬು ನಿಜವಾದ
ಗುಂಭಗುರುತಾದಾರಂಭದೋರುವದ ೨

ಹಿಡಿದು ನಿಜ ವರ್ಮ ಪಡಿಯಬೇಕು ಧರ್ಮ
ಜಡಿದು ಪರಬ್ರಹ್ಮ ಕಡೆವದು ದುಷ್ಕರ್ಮ ೩

ಗುರುವೆ ನರನೆಂದು ಮರೆದುಬಿಡಿ ಸಂದು
ಅರಿತು ನಿಜವೆಂದು ಬೆರೆತು ಕೂಡಿಬಂದು ೪

ಇದೆ ಸ್ವತ: ಸಿದ್ಧ ಸದ್ಗುರು ಕೃಪೆಯಿಂದ
ಸದ್ಗೈಸುವಾನಂದ ಇದೆ ಮಹಿಪತ್ಯೆಂದ ೫

## ೫೧೯

ಸುಗ್ಗಿ ಸುಕಾಲಾಯಿತು ಜಗದೊಳಗೆ
ಅಗ್ಗಳತ್ಯಾಯಿತು ಗುರುದಯಲೆನಗೆ ಧ್ರುವ

ಭಕ್ತಿ ಭೂಮಿಯು ಕೈಗೊಟ್ಟಿತು ಪೂರ್ಣ
ತತ್ವೋಪದೇಶ ತಿಳಿಯಿತು ನಿಧಾನ
ಭಕ್ತರಿಗಿದರಿಡುವದು ಅನುದಿನ
ಮುಕ್ತಿಯ ಫಲ ಮುನಿಜನರಾಭಣ ೧

ಮಳೆಗರಿಯಿತು ಮಹಾಗುರುದಯ ಕರುಣ
ಬೆಳೆಬೆಳೆಯಿತು ಮಹಾ ಸುಜ್ಞಾನದ ಸ್ಫುರಣ
ತಿಳಿಯಿತು ಬರವಿದು ಭವಬಂಧನ
ಕಳೆಯಿತು ಕಾಂಕ್ಷೆ ಹುಟ್ಟುವ ಹೊಂದುಣ ೨

ಮನೋಹರವಾಯಿತು ಗುರುಕೃಪೆಯಿಂದ
ಜನವನದೊಳು ಕಾಣಿಸಿದ ಗೋವಿಂದ
ಅನುಭವ ಸುಖವಿದು ಬ್ರಹ್ಮಾನಂದ
ಘನಸುಖಪಡೆದ ಮಹಿಪತಿ ಇದರಿಂದ ೩

## ೫೨೦

ಸೇವಿಸುವ ಬನ್ನಿರೋ ಭಾವಿಕರೆಲ್ಲ
ಸವಿಸುಖವಾದ ಸದ್ಗುರುವಿನ ಸೊಲ್ಲ ಧ್ರುವ

ಉಂಬುವರಿಗೈದ ತುಂಬಿ ಬಡಿಸ್ಯದ
ಕೊಂಬವರಿಗೆ ಸಂಭ್ರಮವಾಗ್ಯದ ೧

ಅರ್ತವರಿಗ್ಯದ ಅರ್ಥಿ ತಾನಾಗ್ಯದ
ಕರ್ತು ಸದ್ಗುರು ಕೃಪೆ ಪಡೆದವಗದ ೨

ಸವಿಸವಿದುಂಬುವ ಭಾವಿಸಿಕೊಂಬುವ
ಆವಾಗ ಮಹಿಪತಿಸ್ವಾಮಿ ನೆನೆವ ೩

## ೫೨೧

ಸೋಜಿಗವಾಯಿತು ಸದ್ಗುರುವಿನ ಕೃಪೆ ಹೇಳಲೇನು
ನಿಜಗುಹ್ಯದ ಮಾತು ಗುರುತವಾಗಿ ಹ್ಯ ಸಾಧು ಬಲ್ಲ ಖೂನ ಧ್ರುವ

ನೀಗದ ನೀಗಿತು ಹೋಗದ ಹೋಯಿತು ತ್ಯಾಗಲ್ಯೊಂದು
ಬಾಗದ ಬಾಗಿತು ಸಾಗದ ಸಾಗಿತು ಯೋಗಲ್ಯೊಂದು
ಆಗದ ಆಯಿತು ಕೂಗದ ಕೂಗಿತು ಈಗಲ್ಯೊಂದು
ತೂಗದ ತೂಗಿತು ಸುಗಮ ತಾ ತೋರಿತು ಜಗದೊಳೊಂದು ೧

ಹರಿಯದ ಹರಯಿತು ಮುರಿಯದ ಮುರಿಯಿತು
ಹುರಿಯಲೊಂದು
ಮರೆಯದ ಮರೆಯಿತು ಅರಿಯದ
ಅರಿಯಿತು ಅರಿವಿಲೊಂದು
ಸುರಿಯದ ಸುರಿಯಿತು ಗರೆಯದ ಗರಿಯಿತು ತ್ಯರಿಯಲೊಂದು
ಜರಿಯದ ಜರಿಯಿತು ಬೆರಿಯದೆ ಬೆರಿಯಿತು ಕುರಿವಿಲೊಂದು ೨

ಜಾರದ ಜಾರಿತು ಮೀರದ ಮೀರಿತು ಹಾರಲೊಂದು
ತೋರದ ತೋರಿತು ಸೇರದ ಸೇರಿತು ಸಾರಲೊಂದು
ಬೀರದ ಬೀರಿತು ಸಾರಸದೋರಿತು ಕರದಲೊಂದು
ತರಳ ಮಹಿಪತಿಗ್ಹರುಷವಾಯಿತು ಗುರುಕರುಣಲಿಂದು ೩

## ೫೨೨

ಹರಿಯಲರಿಯದು ಜನ್ಮ ಗುರುಪಾದವರಿಯದೆ ಧ್ರುವ

ಬಯಲು ಭಾವಿಸಿ ನಿರ್ಬೈಲ ನೆಲೆಗೊಳ್ಳದೆ
ಭಾವಭಕ್ತಿಯ ಕೀಲು ಹೊಯಿಲು ತಿಳಿಯದೆ ೧

ರವಿ ಶಶಿಯನೊಡಗೊಡಿ ಶಿವಸುಖವ ತಿಳಿಯದೆ
ಜೀವಶಿವದ ಸೂತ್ರ ಸೋಹ್ಯ ಹೊಳಿಯದೆ ೨

ಆಧಾರವಂ ಬಲಿದು ಆರೇರಿ ಬೇರಿಯದೆ
ಮಹಿಪತಿ ನಿನ್ನೊಳು ಗುರುಗತಿ ಅರಿಯದೆ ೩

## ೫೨೩

ಹಿಡಿಯಬ್ಯಾಡಿ ಮೌನ ಪಡೆದುಕೊಳ್ಳಿ ಖೂನ
ಒಡೆದು ಹೇಳುತಾನೆ ನೋಡಿ ಸದ್ಗುರು ನಿಧಾನ ೧

ಅಹಂಭಾವಬಿಟ್ಟು ಸೋಹ್ಯ ಕೇಳಿ ಗುಟ್ಟು
ದೇಹ ಅಭಿಮಾನ ಸುಟ್ಟು ಜಯಸಿ ರತಿವಿಟ್ಟು ೨

ಮಾಡಿ ಗುರುಭಕ್ತಿ ನೋಡಿ ಗತಿಮುಕ್ತಿ
ಕೊಡುವ ಮಹಿಪತಿ ಸ್ವಾಮಿ ಸದ್ಗತಿ ಸುಯುಕ್ತಿ ೩

## ೫೨೪

ಹೊಂದಬೇಕು ನಿಜನೋಡಿ ತಂದೆ ಗುರುನಾಥ
ಒಂದು ಮನದಲಿ ಕಿವಿಗೊಟ್ಟು ಕೇಳಿ ಬೋಧ ಧ್ರುವ

ಪರಧನ ಪರಸತಿಯರ ಬಿಟ್ಟರೆ ಸಾಕು ಹೇಸಿ
ತೋರುವುದು ತನ್ನೊಳು ಪ್ರತ್ಯಕ್ಷ ವಾರಣಾಸಿ

ಸುರಿಮಳೆಗರೆವುದು ಹೆಜ್ಜೆಜ್ಜಿಗೆ ಪುಣ್ಯದ ರಾಶಿ
ಅರಿತು ಏಕರಸವಾಗಿ ಸದ್ಗುರು ಸ್ಮರಿಸಿ ೧

ಜನ್ಮಕೆ ಬಂದ ಮ್ಯಾಲೆ ಪುಣ್ಯಪಥ ಸಾಧಿಸಿ
ಸನ್ಮತ ಸುಖಸಾರದೊಳು ಮನಭೇದಿಸಿ
ಉನ್ಮನವಾಗಿ ಜೀವನ ಸದ್ಗತಿಗೈದಿಸಿ
ಜನ್ಮಕೆ ಬೀಳುವ ಭವಬಂಧನ ಛೇದಿಸಿ ೨

ಸಾಯಾಸದಿಂದ ಸಾಧಿಸಬೇಕು ಸಾಧುಸಂಗ
ಗುಹ್ಯಗುರುತ ನೋಡಲಿಬೇಕು ಅಂತರಂಗ
ಬಾಹ್ಯಾಂತ್ರದೋರುತಿದೆ ಸದ್ಗುರು ಪ್ರಾಣಲಿಂಗ
ಮಹಿಪತಿಗಾಯಿತು ನೋಡಿ ಭವ ಭಯ ಭಂಗ ೩

## ೫೨೫

ಪರ ಅಕ್ಷರವ ಧ್ರುವ
ಕ್ಷರ ಅಕ್ಷರವ ಸೆರಗ ಪಿಡಿಯೋ
ಗುರು ಮುಖದಲಿ ನೀ ಪೂರ್ಣ
ಪರಮಾನಂದ ಸುಖದೋರುವ ಬಗೆ
ಅರಿಯೋ ಕೂಟ ಸ್ಥಳದಲಿ ಪ್ರಾಣಿ ೧

ರೇಚಕ ಪೂರ್ವಕದನುಭವ ತಿಳಿದು
ಯೋಚಿಸಿ ನೋಡಲಿಂದ
ಸೂಚಿಸಿ ತಾನೆ ಭಾಸುವ ಕ್ರಮವಿದು
ಆಚರಿಸೋ ಅನುಭವದಲಿ ಪ್ರಾಣಿ ೨

ಕ್ಷರ ಅಕ್ಷರವ ತಿಳಿಯದೆ ಬರೆವಾ
ಅಕ್ಷರದಾ ಖೂನ್ಯಾಕ
ಎರಡೇ ಮಾತಿನ ಅರಿವೇ ಅದರೆ
ಪರಲೋಕಕ್ಕೆ ಸೋಪಾನವಿದು ಪ್ರಾಣಿ ೩

ಇದೇ ಹೇಳಿದ ಗೀತೆಯಲ್ಲಿ
ಶ್ರೀಕೃಷ್ಣನೆ ತಾಂ ಅರ್ಜುನಗೆ
ಇದರಿಟ್ಟಿದು ಘನಸುಖ ಆ ಮಹಿಮನೆ
ಇದರಿಂದಲಿ ತಿಳಿವದು ನೀ ಪ್ರಾಣಿ ೪

ಇಡಾ ಪಿಂಗಳ ನಾಡಿ ನಡುವಿದು
ಸಾಧಿಸಿ ಮಾತಿನ ಖೂನ
ಎಡಬಲ ನೋಡದೆ ಪಡಕೋ ಮಹಿಪತಿ
ಒಡನೆ ನಿನ್ನೊಳು ನಿಧಾನ ೫

## ೫೨೬

ಜಯ ಜಯ ಜ್ಯೋತಿರ್ಮಯಾನಂದ ಶ್ರೀನಾಥಗೆ
ಜಯ ಜಯಾನಂದ ಸದೋದಿತಗೆ ಧ್ರುವ

ಸದ್ಭಾವನೆ ಭೋಕ್ತ ಸದ್ಗುರುನಾಥಗೆ
ಸದ್ಗೈಸುವ ಸದಾ ಸುಶ್ಯಾಂತಿಗೆ ೧

ಸದ್ಗೈಸುವ ಸದಾ ಶ್ಯಾಂತ ಶ್ರೀನಿಧಿಗೆ
ಸದ್ಭಕ್ತಿಲಿ ಎನ್ನಿ ಸನ್ನಿಧಿಗೆ ೨

ಸ್ವಾನುಭವದ ಕಂದ ಅನಂದೋ ಬ್ರಹ್ಮಗೆ
ಜ್ಞಾನ ಜ್ಞಾನಕನುಪಮಗೆ ೩

ಜ್ಞಾನ ವಿಜ್ಞಾನಕನುಪಮಾಗಿಹಗೆ
ಜಯ ಜಯವೆನ್ನಿ ಶ್ರೀ ಮಹಿಪತಿಸ್ವಾಮಿಗೆ ೪

## ೫೨೭

ಜಯಜಯವೆನ್ನಿರಯ್ಯ ಜ್ಯೋತಿರ್ಮಯಗೆ ಜಯಜಯವೆನ್ನಿರೊ
ಜಯಜಯವೆನ್ನಿರೊ ದಯವುಳ್ಳ ಮಹಿಮೆಗೆ
ಜಯಜಯವೆನ್ನಿರೊ ಧ್ರುವ

ಕಂಗಳದೆರಸಿ ಅಂತರಂಗದೋರಿದವಗೆ
ಮುಂಗಡಲೆ ಇದ್ದು ಸುಸಂಗದೋರಿದವಗೆ
ಹಿಂಗಿಸೆನ್ನ ಭವಭಯ ಭಂಗಮಾಡಿದವಗೆ
ಮಂಗಳಾತ್ಮಕನ ಸಂಗಸುಖ ಬೀರಿದವಗೆ ೧

ಆರು ಅರಿಯದ ವಸ್ತು ಸಾರಿದೋರಿದವಗೆ
ಶಿರದಲಿ ಕರವಿಟ್ಟು ಕರುಣಿಸಿದವಗೆ
ಮೂರುಗುಣಕೆ ಮೀರಿದ ತಾರಕ ಗುರುವಿಗೆ
ಸಾರವಾಡದಲಿ ನಿಂದು ಪಾರದೋರಿದವಗೆ ೨

ಸೋಹ್ಯ ಸೊನ್ನೆಯದೋರಿಸಿನ್ನು ಸಾಹ್ಯ ಮಾಡಿದವಗೆ
ಗುಹ್ಯ ಗುರುತ ತೋರಿದ ಗುರುಮೂರ್ತಿಗೆ
ಅಯ್ಯನಾಗಿ ಮೈಯೊಳಗುಪಾಯದೋರಿದವಗೆ
ಕೈಪಿಡಿದು ಮಹಿಪತಿಗೆ ದಯಮಾಡಿದವಗೆ ೩

## ೫೨೮

ಜಯ ಜಯ ಶ್ರೀ ಸದ್ಗುರುನಾಥ
ದಯಗುಣದಲಿ ನಿಸ್ಸೀಮ ನೀ ಪ್ರಖ್ಯಾತ ಧ್ರುವ

ಸ್ವಯಂಭು ಸ್ವತಂತ್ರ ಸ್ವಪ್ರಕಾಶ
ಸ್ವಯಂಜ್ಯೋತಿಸ್ವರೂಪ ಸ್ವವಿಕಾಸ
ದ್ವೈತಾದ್ವೈತಕೆ ಸಹಿತ ಸ್ವವಿಲಾಸ
ಶ್ರೇಯ ಸುಖದಾಯಕನಹುದೋ ನೀ ಪರೇಶ ೧

ಸ್ವಭಾವ ಸ್ವಸಿದ್ಧ ಸರ್ವಾಧಾರ
ಸ್ವಭಾಸ ಸ್ವತೇಜ ಸಹಜ ನಿರ್ಧಾರ
ಸ್ವಬೋಧ ಸ್ವಬ್ರಹ್ಮ ಸಾಕ್ಷಾತಾರ
ಸ್ವಭಕ್ತಜನರಿಗೆ ನೀನೆ ಸಹಕಾರ ೨

ಸ್ವಾನಂದ ಸದೋದಿತ ಸ್ವಯಂ ಭಾನು
ಸ್ವಾನಭವಲಾದಯ್ಯ ತಾನೆ ತಾನು
ಅನುದಿನ ಭೋರ್ಗರೆವ ನೀ ಕಾಮಧೇನು
ದೀನಮಹಿಪತಿ ಸ್ವಾಮಿ ನೀನೆ ನೀನು ೩

## ೫೨೯

ಜಯ ಜಯ ಮಂಗಳ ಮಹಿಮ ಸುದಾತ
ಜಯ ಜಯ ಸ್ವಾಮಿ ಶ್ರೀಗುರು ಅವಧೂತ ಧ್ರುವ

ನೀನಹುದೊ ಮುನಿಜನ ಪ್ರತಿಪಾಲ
ಅನಾಥ ಬಂಧು ದೀನದಯಾಳ ೧

ಪತಿತಪಾವನ ಯತಿಜನಪ್ರಿಯ
ಅತಿಶಯಾನಂದ ನೀನಹುದೊ ನಮ್ಮಯ್ಯ ೨

ಭಾವಿಕರಿಗೆ ನೀ ಜೀವಕೆ ಜೀವ
ಅವಗೆ ಮಹಿಪತಿ ಕಾವ ನೀ ದೈವ ೩

## ೫೩೦

ಜಯ ಜಯವೆನ್ನಿ ಗುರು ಜಗದೀಶಗೆ
ಜಯ ಜಯ ಜಗತ್ರಯ ಪಾವನಗೆ ಧ್ರುವ

ಆನಂದೊ ಬ್ರಹ್ಮ ಆನಂದ ಕಂದಗೆ
ಅನುದಿನ ಜಯ ಜಯ ಅನುಪಮಗೆ

ಸನಕ ಸನಂದನ ವಂದಿತಗೆ
ಮುನಿಜನ ಹೃದಯ ನಿವಾಸಗೆ ೧

ನಿಗಮಗೋಚರ ನಿತ್ಯ ನಿರ್ಗುಣಗೆ
ಅಗಣಿತಗುಣ ಪರಿಪೂರ್ಣಗೆ
ಝುಗಿಝುಗಿಸುವ ಜಗನ್ಮೋಹನಗೆ
ಜಗಜ್ಜೀವ ಜಗದಾತ್ಮಗೆ ೨

ಜಯ ಜಯ ಮಂಗಳ ಮಹಾಮುನಿಗೆ
ಮಹಿಮಾನಂದ ಗುರುಮೂರ್ತಿಗೆ
ಮಹಿಪತಿ ಸ್ವಾಮಿ ಸರ್ವೋತ್ತಮಗೆ
ಜಯ ಜಯವೆನ್ನಿರೊ ಜಗದೊಳಗೆ ೩

## ೫೩೧

ಜಯ ಜಯವೆನ್ನಿರೊ ಶ್ರೀ ಗುರುವಿಗೆ
ದಯಾಸಿಂಧು ಶ್ರೀಸ್ವಾಮಿ ಸದ್ಗುರುವಿಗೆ ಧ್ರುವ

ಗುಹ್ಯಗುರುತ ದೋರುವ ಗುರುಮಣಿಗೆ
ಮಾಯರಹಿತ ನಿರಾಳ ನಿರ್ವಾಣಿಗೆ
ತ್ರೈಲೋಕ್ಯವಂದಿತ ವರಮುನಿಗೆ
ದಯಯುಳ್ಳ ಶ್ರೀ ದೇವಶಿಖಾಮಣಿಗೆ ೧

ತ್ರಿಗುಣಾತೀತ ತಾರಕ ನಿರಂಜನಗೆ
ಝುಗಿ ಝುಗಿಸುವ ಜಗನ್ಮೋಹನಗೆ
ಜಾಗಿಸುವ ಜಗತ್ರಯ ಜೀವನಿಗೆ
ಯೋಗಿಜನ ಧ್ಯಾಯಿಸುವ ನಿರ್ವಾಣಿಗೆ ೨

ಜಯ ಜಯವೆನ್ನಿರೊ ಗುರುಮೂರ್ತಿಗೆ
ಇಹಪರ ಪೂರ್ಣ ಪರಂಜ್ಯೋತಿಗೆ
ಬಾಹ್ಯಾಂತ್ರ ಭಾಸುವ ಶ್ರೀಪತಿಗೆ
ಮಹಿಪತಿಯ ಶ್ರೀ ಸ್ವಾಮಿ ಜಗತ್ಪಿತಗೆ ೩

### ೫೩೨

ಜಯ ಜಯಾನಂದ ಕಂದ ಜಯ ನಿರ್ಗುಣ ನಿರ್ದ್ವಂದ್ವ ಧ್ರುವ

ಒಳಗೆ ಹೊರಗೆ ನೀನೆ ಪೂರ್ಣ ಬೆಳಗಿ ಬೆಳಗಾಗಿಹುದ
ಥಳಥಳಿಸುವ ಗುಣ ಹೊಳವು ಸುಳವು ಪಾವನ ೧

ದೇವಾಧಿದೇವ ದೇವ ಭುವನತ್ರಯಕೆ ಜೀವ
ಭಾವಿಕರಿಗೆ ಕಾವ ಭವನಾಶಗೈಸುವ ೨

ತೇಜೋಮಯ ಪೂರ್ಣಸಾಂದ್ರ ಅಜ ಸುರವರ ಮುನೀಂದ್ರ
ನಿಜಘನಸುಖಮುದ್ರ ರಾಜ ರಾಜರಾಜೇಂದ್ರ ೩

ಮುನಿಜನರ ಪ್ರಾಣಪದಕ ಅನುಭವದ ನಿಜಸುಖ
ಖೂನ ವಿಶ್ವತೋಮುಖ ಅಣುರೇಣು ವ್ಯಾಪಕ ೪

ಮೂರು ಗುಣಕೆ ರಹಿತ ಗುರುಮೂರ್ತಿ ಸಾಕ್ಷಾತ
ತರಳ ಮಹಿಪತಿದಾತ ಹೊರಿಯೊ ನೀ ಸದೋದಿತ ೫

### ೫೩೩

ಜಯ ದೇವ ಜಯ ದೇವ ಜಯ ಗುರು ನಾಗೇಶ
ದಯಗುಣದಲಿ ನೀ ಮಾಡೊ ಭವತಾಪ ನಾಶ ಧ್ರುವ

ಜನ್ಮ ಮರಣಗಳೆಂಬ ಖಚ್ಚಿಖವಡಿಗಳು
ನಿಮ್ಮ ನಾಮಸ್ಮರಣಿಲೆ ಓಡುದು ದುರಿತಗಳು

ಬ್ರಹ್ಮಾನಂದದ ಸುಖ ಭಾಸುದು ಮನದೊಳು
ನಮ್ಮ ಸ್ವಾಮಿ ನೀನೆ ಅಹುದೊ ಕೃಪಾಳು ೧

ತಾಪತ್ರಯವೆಂಬುದು ಬಲು ಪೀಡಿಯ ಗುಣ
ಆಶೆ ನೀನೆ ಪರಿಹಾರ ಮಾಡೊ ಘನ ಕರುಣ
ಕೋಪತಾಪವೆಂಬುದು ತದ್ದುದುರೀಯ ಗುಣ
ಕೃಪೆಯಿಂದಲಿ ಮಾಡುದು ನಿಮ್ಮ ಶ್ರಮ ನಿರ್ವಾಣ ೨

ದುರಿತ ಸಂಹಾರ ಸುರಜನ ಸಹಕಾರ
ಕರುಣಾಕರ ಗುರುಮೂರ್ತಿ ಮುನಿಜನ ಮಂದಾರ
ತರಳ ಮಹಿಪತಿಸ್ವಾಮಿ ಘನ ಕೃಪಾಕರ
ಶರಣ ರಕ್ಷಕ ಪೂರ್ಣ ನೀ ಜಗದೋದ್ಧಾರ ೩

## ೫೩೪

ಜಯ ದೇವ ಜಯ ದೇವ ಜಯ ಗುರು ಮೈಲಾರಿ
ಮನಮೈಲ ಮರ್ದಿಸಿದಯ್ಯ ನೀನೆ ಅಸುರಾರಿ ಧ್ರುವ

ಖಡ್ಗವ ಕರದಲಿ ಪಿಡಿದು ಖಂಡಿಸಿದಜ್ಞಾನ
ಖಂಡೇರಾಯೆನಿಸಿಕೊಂಡು ಪ್ರಕಟಿಸಿದನುದಿನ
ಹಿಂಡದೈವಕೆ ಪ್ರಚಂಡನಹುದೊ ಪರಿಪೂರ್ಣ
ಮಂಡಲದೊಳು ನಿಮ್ಮ ಕೊಂಡಾಡುದು ತಾ ಸುರಜನ ೧

ಮಲಹರಣ ಮಾಡಲು ಧರಿಸಿ ಅವತಾರ
ಮೂಲೋಕ ಪಾವನಮಾಡುವ ಸಹಕಾರ
ಸಲಹುವೆ ಭಕ್ತಜನರಿಗೆ ನೀ ಘನ ಮಂದಾರ
ಮಲೆತಿಹ ದೈತ್ಯರ ಸಂಹರಿಸುವೆ ನೀ ಅತಿಶೂರ ೨

ಮಹಿಗೆ ಪತಿ ಅಹದು ಶ್ರೀಗುರು ಭೂಪತಿ
ಬಾಹ್ಯಾಂತ್ರಿ ಬೆಳಗುವೆ ಶ್ರೀಪಾದಕೆ ಆರ್ತಿ
ಇಹಪರಕೆ ದಾತನಹುದೊ ಶ್ರೀಪತಿ
ಜಯಜಯವೆಂದು ಬೆಳಗುವೆ ದಾಸ ಮಹಿಪತಿ ೩

## ೫೩೫

ಜಯ ದೇವ ಜಯ ದೇವ ಜಯ ಜಗಜೀವನ
ಜಯ ಕರುಣಾಕರಮೂರ್ತಿ ಅನುಸೂಯ ಕರ ರತ್ನ ಧ್ರುವ

ತೇಜೋನ್ಮಯ ಪರಿಪೂರ್ಣ ಅಜ ಸುರ ಮುನಿ ಪ್ರಾಣ
ರಾಜ ತೇಜೋನಿಧಿ ರಾಜೀವ ನಯನ
ನಿಜ ನಿರ್ಮಳ ನಿರ್ಗುಣ ಸುಜನ ಸುಭೂಷಣ
ಭಜಕ ಭಯಹರ ಪೂರ್ಣ ತ್ರಿಜಗ ಪಾವನ ೧

ಭಕ್ತ ಜನ ಉದ್ಧಾರ ಘನಗುರು ದಾತಾರ
ಪತಿತಪಾವನಮೂರ್ತಿ ಮುನಿಜನ ಮಂದಾರ
ಅತಿಶಯಾನಂದ ಅನುಪಮ ವ್ಯಾಪಕ ನಿರ್ಧಾರ
ಸತತ ಸುಪಥ ಸದ್ಗುರು ಸಹಕಾರ ೨

ಸಹ್ಯಾದ್ರಿ ಗಿರಿವಾಸ ಶ್ರೀಗುರು ಸರ್ವೇಶ
ಬಾಹ್ಯಾಂತ್ರ ಪರಿಪೂರ್ಣ ಜಗದೀಶ
ಮಹಿಪತಿಸ್ವಾಮಿ ಶ್ರೀ ದೇವದೇವೇಶ
ಇಹಪರ ದಾತ ಭಾಸ್ಕರಕೋಟಿ ಪ್ರಕಾಶ ೩

## ೫೩೬

ಜಯ ದೇವ ಜಯ ದೇವ ಜಯ ನಿರಂಜನ
ಭವ ಭಂಜನ ಗುರು ತಾರಕ ಋಷಿಮುನಿ ಜೀವನ ಧ್ರುವ

ಅನಂತ ಗುಣ ಪರಿಪೂರ್ಣ ಅನಂದಮಯ ಘನ
ಸ್ವಾನಂದ ಸದೋದಿತ ಸದ್ಗುರು ನಿಧಾನ
ಅನಾದಿ ಮಹಿಮಾನಂದ ಸುಜ್ಞಾನಾಂಜನ
ಅನೇಕ ಸಕಲಾಗುಮಪೂಜಿತ ಸೇವಿತ ತ್ರಿಭುವನ ೧

ಕಲ್ಪತರು ಚಿಂತಾಯಕ ಅನಾಥ ರಕ್ಷಣ
ಭಕ್ತಜನ ಸಹಕಾರ ತ್ರಿಜಗ ಜೀವನ
ಅವ್ಯಕ್ತ ಅವಿನಾಶ ಅತೀತ ಸುಜ್ಞಾನ
ಭಕ್ತ ಕೃಪಾನಿಧಿ ವಿಶ್ವವಂದನ ೨

ಸಜ್ಜನ ಸಂಜೀವನ ಸದ್ಗುರು ಚಿದ್ಘನ
ಸಗುಣ ನಿರ್ಗುಣ ಸಹಕಾರ ಸುರಮುನಿ ರಂಜನ
ಮಹಿಪತಿ ತಾರಕ ಗುರು ಪತಿತಪಾವನ
ಸದ್ಬ್ರಹ್ಮಾನಂದ ಸದೋದಿತ ಸದ್ಗತಿ ಸಾಧನ ೩

## ೫೩೭

ಜಯ ದೇವ ಜಯ ದೇವ ಜಯ ಬ್ರಹ್ಮಾನಂದ
ಜಯ ಜಯವೆಂದು ಬೆಳಗುವೆ ಬೆಳಗಿಲಿ ನಿಮ್ಮಿಂದ ಧ್ರುವ

ಅರುವಿಗೆ ನಿಮ್ಮರುವುದೋರಿತು ಘನದರುವು
ಅರುವೆ ಅರುವಾಗಿದೋರಿತು ಅರುವೆ ಘನ ಅರುಹು
ತಿರುಹುಮುರವ್ಹಿನ ಕುರುವುದೋರಿತು ಘನದರುವು
ಕುರುವ್ಹೆ ಕುರುವ್ಹಾಗಿದೋರಿತು ಘನ ಪರಾತ್ಪರವು ೧

ಬೆಳಗಿನ ಘನ ಬೆಳಗು ಹೊಳೆವದು ಥಳಥಳವು
ಹೇಳೇನಂದರೆ ಬಾರದು ತಿಳವ್ಹಿಗೆ ನಿಜಸುಳಹು
ಕಳೆ ಮೊಳೆಗಳ ಉಳಹು ತುಳಕುತ ಘನದೊಲವು
ಭಳಭಳ ಭಾಸುವ ನಿಮ್ಮ ಬೆಳಗೆ ನಿರ್ಮಳವು ೨

ಅನುಭವದಾರತಿ ಸ್ವಾನುಭವದ ಪ್ರೀತಿ
ಅನುದಿನ ಬೆಳಗುವದು ತಾ ಘನಗುರು ನಿಜಪ್ರೀತಿ
ತಾನೆತಾನಾಗಿಹ ಜ್ಞಾನಸಾಗರ ಮೂರ್ತಿ
ದೀನಮಹಿಪತಿ ಬೆಳಗುವೆ ಮನ ಮಂಗಳಾರ್ತಿ ೩

## ೫೩೮

ಜಯ ದೇವ ಜಯ ದೇವ ಜಯ ಮಂಗಳ ಮಹಿಮ
ದಯಗುಣದಲಿ ನಿಸ್ಸೀಮ ಜಯಗುರು ನಿರುಪಮ ಧ್ರುವ

ಅನುಭವಕಾಗುವ ಚಂದ ಸ್ವಾನುಭವದ ಕಂದ
ಜ್ಞಾನ ವಿಜ್ಞಾನಂದ ಘನಮಯ ನಿರ್ದ್ವಂದ್ವ
ದ್ವಂದ್ವನಿರ್ದೂಂದ್ವ ತಾನೆ ತನ್ನಿಂದ
ಎಂದೆಂದಿಗೆ ಬ್ಯಾರಿಲ್ಲ ದೋರುದು ನಿನ್ನಿಂದ ೧

ದ್ವೈತಾದ್ವೈತಕೆ ರಹಿತಾಶ್ರಯಗುರು ನಿಜದಾತ
ತ್ರೈಗುಣಾತೀತ ಶಾಂತ ನಿರ್ಗುಣ ನಿಶ್ಚಿಂತಾ
ನಂತಾನಂತಕೆ ಸಂತತ ನೀನೆ ಏಕಾಂತ
ಪಂಥ ಪರಮಗುಹ್ಯಾನಿಹ ಶ್ರೀ ಅವಧೂತ ೨

ಸ್ವಸಂವೇದ್ಯ ನೀ ಪೂರ್ಣಋಷಿಮುನಿಗಳ ಧ್ಯಾನ
ಲೇಸುಲೇಸಾಗಿಹ ಆತ್ಮನುಭವ ಖೂನ
ಈಶ ನೀನೊಬ್ಬನಾಗಿಹ ಅನುದಿನ
ದಾಸ ಮಹಿಪತಿ ಪ್ರಾಣ ಭಾಸ್ಕರ ಘನಕರುಣ ೩

## ೫೩೯

ಜಯ ದೇವ ಜಯ ದೇವ ಜಯ ವರ ಗುರುಮೂರ್ತಿ
ಜಯ ಜಯವೆಂದು ಬೆಳಗುವೆ ಬೆಳಗುವೆ ಮನದಾರ್ತಿ ಧ್ರುವ

ಜ್ಯೋತಿಗೆ ಸ್ವಜ್ಯೋತಿ ಘನಪರಂಜ್ಯೋತಿ
ನೇತಿ ನೇತಿಯೆಂಬುದು ನೋಡಲು ಘನಶ್ರುತಿ
ಶ್ರುತಿಸ್ಮೃತಿಗೆ ತಿಳಿಯ ನೀ ಅಪ್ರತಿ
ಅತಿಸೂಕ್ಷ್ಮ ನಿನ್ನರಿವುದು ಸದ್ಗುರು ದಯಕೀರ್ತಿ ೧

ರಾಜಿಸುತಿಹ ನಿಜ ವಿಶ್ವದ ನೀ ಬೀಜ
ರಾಜತೇಜೋನಿಧಿ ಸಹಜೆ ಸಹಜ
ಅಜ ಸುರವಂದ್ಯ ಸುಜನರಾತ್ಮದ ನೀಗ್ರೂಜ
ರಾಜಮಹಾರಾಜ ಸದ್ಗುರು ಸುಭೋಜ ೨

ಮನೋನ್ಮನದ ಮಗುಟ ಸ್ವಾನುಭವಕೆ ನೀಟ
ಜ್ಞಾನರಹಿತ ಕೂಟ ಘನ ದಯನೋಟ
ಅನುವಾಗಿದೋರಿತು ನೀಟಕೆ ನಿಜನೀಟ
ದೀನಮಹಿಪತಿಸ್ವಾಮಿ ನೀನೆ ಘನಪ್ರಗಟ ೩

## ೫೪೦

ಜಯ ಸದ್ಗುರು ಮೂತಿ ದಯವುಳ್ಳ ನಿಮ್ಮ ದಯ ಕೀರ್ತಿ ಧ್ರುವ

ದಯಗುಣದಲಿ ಬಲು ಉದಾರ ತ್ರೈಲೋಕ್ಯಕೆ ನೀನೆ ಆಧಾರ
ಜಯ ಸದ್ಗುರು ಮಾಮನೋಹರ ಇಹಪರ ಸಹಕಾರ ೧

ಮುನಿಜನರಿಗೆ ನೀ ಪ್ರತಿಪಾಲ ಸ್ವಾನುಭವದ ಸುಖದ ಕಲ್ಲೋಳ
ಘನಗುರು ನೀನೆ ಕೃಪಾಲ ದೀನದಯಾಳ ೨

ಕರುಣಾಸಾಗರದಲಿ ನೀ ಪೂರ್ಣ ತರಳಮಹಿಪತಿ
ಜೀವದ ಸುಪ್ರಾಣ
ಪರಮಾಮೃತದ ನಿಧಾನ ಹೊರಿಯೊ ನೀ ಕರುಣ ೩

## ೫೪೧

ಬೆಳಗುವ ಬನ್ನಿ ಮಂಗಳಾರತಿಯ
ಹೊಳೆಯುವ ಶ್ರೀ ಗುರುಮೂರುತಿಯ ಧ್ರುವ

ಮಂಗಳಸ್ವರದಲಾರತಿ ಮಾಡುವ
ಕಂಗಳಲಿ ಕಂಡು ಸ್ವಾಮಿ ನಲಿದಾಡುವ
ಸಂಗಸುಖದ ಸವಿ ಸೂರ್‍ಯಾಡುವ
ಮಂಗಳೋಚ್ಚಾಯವ ಕೊಂಡಾಡುವ ೧

ಪಾಡುವ ಬನ್ನಿ ನಾಮಗಾಯನ
ಬೇಡುವದಿದೇ ಸುಖಸಾಧನವ
ನೀಡುತಲಿಹ ನಿಜನಿಧಾನವ
ಪಡೆವದಿದೊಂದು ಮುಖ್ಯ ಕಾರಣ ೨
ಬಿಡದೆ ಕೊಂಡಾಡುವ ಕೀರುತಿಯ
ಪೊಡವಿಯೊಳು ಪಾಂಡವ ಸಾರಥಿಯ
ಮಾಡುವ ಬನ್ನಿ ಸೇವೆ ಶ್ರೀಪತಿಯ
ಒಡಿಯನಹುದೆಂದು ನೀ ಮಹಿಪತಿಯ ೩

## ೫೪೨

ಜೋ ಜೋ ಧ್ರುವ

ದೃಷ್ಟಿಯೊಳು ಗುರುದೃಷ್ಟಾಂತ ಪುಟ್ಟಿ ದೃಷ್ಟಾಂತನುಭವ
ತೊಟ್ಟಿಲ ಕಟ್ಟಿ
ನಟ್ಟನಡುಮಧ್ಯ ಜಗಜಟ್ಟಿ ತೊಟ್ಟಿಲ ತೂಗಿರೆ ಮನಮುಟ್ಟಿ ೧

ಧ್ಯಾನಧಾರಣದರಳೆಲೆ ಮಾಡಿ ಕರ್ನಕುಂಡಲ ಲಯಲಕ್ಷವಿಡಿ
ಜ್ಞಾನವೈರಾಗ್ಯ ಸರಪಳಿಮಾಡಿ ಸ್ಮರಣಿ ಹುಲಿ ಉಗುರ
ಕರುಣನ ಪಾಡಿ ೨

ಚಿತ್ತ ಚಿಂತನಿ ಅಸರೀಫ ಮಾಡಿ ಭಕ್ತಿಭಾಂವ
ತೋಳತಾಯಿತವಿಡಿ
ರತಿಪ್ರೇಮರತ್ನದುಂಗರಮಾಡಿ ವಸ್ತ್ರ ಶ್ರೀಗುರುಮುರ್ತಿಯ
ನೋಡಿ ೩

ನಡುನಿಶ್ಚಯದುಡುದಾರ ಮಾಡಿ
ಜಡಿತಾಭರಣದುಡುಗಿಯ ನೀಡಿ
ದೃಢಗೆಜ್ಜೆ ಹಾಲಗಡಗವ ಮಾಡಿ ಒಡಿಯ
ಶ್ರೀ ಸರ್ವೋತ್ತಮನ ಪಾಡಿ ೪

ನಿತ್ಯ ಆನಂದಮೂರ್ತಿಯ ತೂಗಿ ಪತಿತ ಜೀವನಪಾವನ್ನವಾಗಿ
ಚಿತ್ತಮನಬುದ್ಧಿ ಏಕತ್ವವಾಗಿ ಭಕ್ತವತ್ಸಲನ ತೊಟ್ಟಿಲ ತೂಗಿ ೫

ಅದೃಷ್ಟದಲಿ ಸದೃಷ್ಟವಾಗಿ ಸದ್ಬ್ರಹ್ಮಾನಂದ ಸದ್ಗುರುಯೋಗಿ
ಸಾದೃಶ್ಯದಲಿ ಸಂತೃಪ್ತವಾಗಿ ಆದಿ ಅನಾದಿಯ
ಮೂರ್ತಿಯ ತೂಗಿ ೬

ಯೋಗ ಆನಂದಭೋಗವ ಮಾಡಿ ಜಗ
ಜೀವನಮೂರ್ತಿಯ ಪಾಡಿ
ಜಾಗ್ರತ ಸ್ವಪ್ನ ಸುಷುಪ್ತಿ ತತ್ವಮಾಡಿ ತೂಗಿದ ಮಹಿಪತಿ
ಘನ ಕೂಡಿ ೭

## ೫೪೩

ಜೋ ಜೋ ಜೋ ನಿತ್ಯಾನಂದನೆ ಜೋ
ಜೋ ಸಚ್ಚಿದಾನಂದನೆ
ಜೋ ಜೋ ದೇವಕಿಕಂದನೆ ಜೋಜೋ ಬ್ರಹ್ಮಾದಿವಂದ್ಯನೆ ಧ್ರುವ

ಹುಟ್ಟಿ ಬಂದು ನಿಜದೋರಿದೆ ಖೂನ
ಮುಟ್ಟಿ ಬೀರುವ ಸುಚಿನ್ಹಸಾಧನ
ಇಟ್ಟ ಕಾವಲಿ ಹಾಕಿದೆ ಮೌನ
ಮೆಟ್ಟಿಮರ್ದಿಸಿ ಬಂದೆ ಮಾವನ ೧

ಮಾಡಬಂದೆ ನೀ ಧರ್ಮಸ್ಥಾಪನಿಯ
ನೋಡಬಂದೆನಿಷ್ಟ ಜನರಾರ್ಚನಿಯ
ಆಡಬಂದೆ ನಂದಯಶೋದೆ ಮನಿಯ
ನೀಡಬಂದೆ ನಿಜಸುಖಸಾಧನಿಯ ೨

ಶಿಷ್ಟಜನರಿಗಾಗಿ ಸಹಾಕಾರಿ
ಸೃಷ್ಟಿಯೊಳು ತೋರಬಂದೆ ಶ್ರೀಹರಿ
ದುಷ್ಟ ಜನರ ಮರ್ದಿಸುವಾವತಾರಿ
ತೊಟ್ಟಿಲೊಳಾಡುತಿದ್ದ ಕಂಸಾರಿ ೩

ದೇವಾದಿಗಳ ಮಗುಟಮಣಿಯೆ
ಭಾವಿಸಲಳವಲ್ಲ ಸದ್ಗುಣಿಯೆ
ಕಾವ ದೈವ ನೀನೆ ಕೃಷ್ಣ ಕರುಣೆಯೆ
ದೇವಕಿ ಗರ್ಭನಿಧಾನದ ಖಣಿಯೆ ೪

ಬಲವಾಗಿ ಎನಗಬಂದೆ ಸರ್ವೇಶ
ಒಲಿದು ಭಾನುಕೋಟಿತೇಜಪ್ರಕಾಶ

ಫಲವ ನೀಡಿ ತೋರಬಂದೆ ಸಂತೋಷ
ಸಲಹಬಂದೆ ಮಹಿಪತಿ ಪ್ರಾಣೇಶ ೫

ಮನೋಹರ ಮಾಡುವ ನೀನೆ ಸಹಕಾರಿ
ಅನುದಿನ ಲೆವಕಲ ನೀನೆ ಮುರಾರಿ ೬

ಅನೆ ಕಾಯಲಿಪರಿ ನೀನೆ ಉದಾರಿ
ಅನಾಥರಿಗೊಲುವ ನೀನೆ ಶ್ರೀಹರಿ ೭

ಪತಿತ ಪಾವನ ಪೂರ್ಣ ನೀನೆ ನಿಶ್ಚಯ
ಹಿತದಾಯಕ ನೀನಹುದೊ ಮಹಿಪತಿಯ ೮

## ಮನಸ್ಸಿಗೆ ಉಪದೇಶ

### ೫೪೪

ಏನಾಯಿತೇನಾಯಿತು ಮನವೆ
ನಾನೆಂಬುದೇನಾಯಿತು ಧ್ರುವ

ಕರಿಯ ನುಂಗಿದ ಬೆಳವಲಣ್ಣಿನಂತಾಯಿತು ೧

ಅಪ್ಪಿನೊಳುಪ್ಪು ಬೆರದಂತಾಯಿತುಮನವೆ ೨

ಕರ್ಪುರವ ಸುಟ್ಟರಹಿಟ್ಟಂತಾಯಿತು ೩

ಮಹಿಪತಿಯ ಮನವೆ ಕೇಳೆನ್ನಾ ಮನವೆ ೪

ಎನ್ನೊಳು ಘನ ಬ್ರಹ್ಮತಾನಾಯಿತು ೫

## ೫೪೫

ಏಳುತಲೆದ್ದು ಮನವೆ ನೀ ವಲೀ ನಿಜಖೂನ
ಕುಲಕೋಟಿ ಉದ್ಧರಿಸುವ ನೆಲೆನಿಭ ಸ್ಥಾನ
ಬೆಳಗಾಗಲಿಕ್ಕೇರಿತು ನೀ ಒಳಿತಾಗಿ ಪೂರ್ಣ
ತಿಳಕೊಂಡು ಮಾಡು ಗುರುಮೂರ್ತಿಗೆ ಸುನಮನ ೧

ಒಳಮುಖನಾಗರಿಯೋ ನೀ ಸುಲಲಿತ ಜ್ಞಾನ
ಅಲೇಶ ಮಾಡದೆ ನೀ ಬ್ಯಾಗ ಬಲಿ ನಿಜಧ್ಯಾನ
ಥಳಥಳಗುಡುತಲ್ಯದ ಒಳಿತಾಗಿ ಪೂರ್ಣ
ತಿಳಕೊಂಡು ಮಾಡು ಗುರುಮೂರ್ತಿಗೆ ಸುನಮನ ೨

ತೊಳಿಬೇಕೆಲೊ ಮನದ ಹೀನ ಮಲಿನಗುಣ
ಕಳಿಬೇಕು ನೋಡುಳಿದ ಕರ್ಮ ತಮಂಧತನ
ಕಳೆಕಾಂತಿಯುಳ್ಳ ಕರುಣಾರ್ಣವ ಸ್ವಾಮಿ ಪೂರ್ಣ
ತಿಳಕೊಂಡು ಮಾಡು ಗುರುಮೂರ್ತಿಗೆ ಸುನಮನ ೩

ಸಲೆ ಮೊರೆಹೊಕ್ಕು ನೀ ಸದಾಬಲಿ ಭಕ್ತಿ ಪೂರ್ಣ
ನೆಲೆಗೊಂಡಿರೊ ಅನುದಿನ ಸದ್ವಸ್ತು ಶರಣ
ಸಕಳ ಸುರವುತಲ್ಯದೆ ಬಲ್ಲ ಸ್ವಾಮಿ ಕರುಣ
ತಿಳಕೊಂಡು ಮಾಡು ಗುರುಮೂರ್ತಿಗೆ ಸುನಮನ ೪

ಇಳೆಯೊಳಿದೆ ಸಕಲಪುಣ್ಯಶಿರೋನಿಧಾನ
ಫಳಿಸುವದೊಂದೆ ಸುಫಳಿತ ಸುದಿವ್ಯ ಘನ
ತಿಳಿಯೊ ಸುಮನವೆ ಮಹಿಪತಿಸ್ವಾಮಿ ಪೂರ್ಣ
ಒಲುವಾಂಗೆ ಮಾಡು ಗುರುಮೂರ್ತಿಗೆ ಸುನಮನ ೫

## ೫೪೬

ಕರುಣಾ ಸಾಗರ ಬಿರುದ
ತರಣೋಪಾಯದೋರುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೧

ದುರಿತ ನೀಗಿಸುವ
ತ್ವರಿತ ಪುಣ್ಯಗೈಸುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೨

ಹರುಷನಾಗಿ ಸೂಸುದ
ಗುರುತವಾಗಿ ಭಾಸುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೩

ಅರಹುಪೂರ್ಣನೀಡುವ
ಕುರುಹುಮಾಡಿ ಕೂಡುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೪

ಹರಿಯ ತಂದುಗುಡುದ
ಸಿರಿಯ ಸೌಖ್ಯಲಿಡುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೫

ಸಾರಸೇವಿಸುವದ
ಗುರುಪಾದಾರವಿಂದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೬

ಬೆರೆದು ಘನಗೂಡುದ
ಹರುಷ ಮಹಿಪತಿಗ್ಯಾಗುದ
ಸ್ಮರಿಸೊ ಮನವೆ ಸದಾ ಶ್ರೀಗುರುನಾಮಗೊಂಬುದ ೭

## ೫೪೭

ನೆನೆ ಕಂಡ್ಯ ಮನವೆ ಸದ್ಗುರು ದಿವ್ಯಪಾದ
ಖೂನ ತೋರುವದಿದೆ ನಿಜಬೋಧ ಧ್ರುವ

ನೆನೆಯಬೇಕೊಂದೆ ಭಾವದಿಂದೆ
ತಾನೆತಾನಾಗುವ ಗುರು ತಾಯಿತಂದೆ ೧

ಘನ ಸುಖ ಕೊಡುವ ಅನುಭವದಲಿಡುವ
ಜನನ ಮರಣದ ಬಾಧಿಯ ಮೂಲಗಡೆವ ೨

ಗುರುವಿಂದಧಿಕ ಬ್ಯಾರಿಲ್ಲ ಸುಖ
ತಿರುಗಿ ನೋಡಲು ತನ್ನೊಳಾದ ತಾ ಕೌತುಕ ೩

ಇದೆ ನಿಜಬೋಧ ಸ್ವಸುಖದ
ಭೇದಿಸಿದವರಿಗಿದೆ ಸುಪ್ರಸಾದ ೪

ಗುರುತಾ ತೋರುವ ಸುರಿಮಳೆಗರೆವ
ತರಳ ಮಹಿಪತಿಸ್ವಾಮಿ ಅನುದಿನ ಹೊರೆವ ೫

## ೫೪೮

ಭಜಿಸೊ ಮನವೆ ಪೂರ್ಣ ನಿತ್ಯ ನಿಜ ಘನ ಸದಾ
ಅಜಸುರೊಂದಿತ ಗುರುಮೂರ್ತಿ ಪಾದ ಧ್ರುವ

ಗುರು ಮಾರ್ಗವೆ ನಿತ್ಯ ಅರಿಯಬೇಕಗತ್ಯ
ಶರಣ ಜನರಿಗೆ ಸತ್ಯ ಪರಮಪಥ್ಯ ೧

ಗುರುಭಜನಿಯ ಕೀಲು ಅರಿತರೊಂದೇ ಮೇಲು
ಸಾರಸುಪಥಸಲ್ಲು ತ್ವರಿತಗೆಲ್ಲು ೨

ಮುಕ್ತಿಗಿಂತಧಿಕ ಭಕ್ತಿ ಪರಮ ಸುಖ
ನಿತ್ಯ ಮಹಿಪತಿಗಿದೆ ಪ್ರಾಣಪದಕ ೩

## ೫೪೯

ಬಿಡದಿರೊ ಎನ್ನ ಮನವೇ ಬಿಡದಿರೊ ದೃಢದಿಂದ
ಸದ್ಗುರು ಪಾದ ಧ್ರುವ

ಸಕಲಾತ್ಮನೆಂದು ಶ್ರುತಿ ಪ್ರಕಟಿಸಿ ಪೇಳುತಿದೆ
ವಿಕಟಿತಗೊಂಬುದೇನು ಕಾಕ ಬುದ್ಧಿಂದ ೧

ಚೆನ್ನಾಗಿ ಸಾರುತಿದೆ ನಾನ್ಯ:ಪಂಥವೆಂಬ ಮಂತ್ರ
ಭಿನ್ನವಿಲ್ಲದೆ ನೋಡು ನಿನ್ನೊಳಗೀಗ ೨

ಸರ್ಕನೆ ಮಾಡಿಕೊಂಬುದು ಆರ್ತಿ ಉಳ್ಳವರ ಸಂಗತಿ ಬ್ಯಾಗ
ತರ್ಕಿಸಬ್ಯಾಡಿತರ ಕೂಡ ಮರ್ಕಟ ಬುದ್ಧಿಂದ ೩

ಇಡಿದು ತುಂಬಿಹ್ಯ ವಸ್ತು ಪಡಕೋ ಗುರುಕೃಪೆಯಿಂದ
ಎಡಬಲ ನೋಡದೆ ಈಗ ಕೂಡು ನೀ ಬ್ಯಾಗೆ ೪

ಸಾಧಿಸಿ ಸದ್ಗುರು ಪಾದ ಭೇದಿಸೊ ನೀ ಬ್ರಹ್ಮಬೋಧ
ಸಾಧುಸದ್ಗೈಸುವದಾ ಸದ್ವಸ್ತುದ ೫

ಎಲ್ಲಾರೊಳಿಹ ನಮ್ಮ ಫುಲ್ಲಲೋಚನ ಶ್ರೀಕೃಷ್ಣ
ಸುಲಭವಾಗಿಹ ಬಲ್ಲವರಿಗೆ ೬

ಬಾಹ್ಯಾಂತ್ರ ಪರಿಪೂರ್ಣ ಮಹಿಪತಿ ಗುರುನಿಧಾನ
ಇಹಪರಾನಂದ ಘನ ಸಾಯೋಜ್ಯ ಘನ ೭

## ೫೫೦

ಸಚ್ಚಿದಾನಂದನ ನೆಚ್ಚಿಕೊಂಡಿರೋ ಮನವೆ ಧ್ರುವ

ಎಚ್ಚತ್ತಿರೋ ನಿನ್ನೊಳು ನಿಶ್ಚಿಂತನಾಗಿ ನೀಬಾಳು
ಅಚ್ಯುತಾನಂತ ಕೃಪಾಳೂ ನಿಶ್ಚಯದಲಿ ಕೇಳು ೧

ಕೊಟ್ಟ ಭಾಷೆಗೆ ತಪ್ಪ ಶಿಷ್ಟ ಜನರ ಪಾಲಿಪ
ದೃಷ್ಟಿಸುವ ನಿಜಸ್ವರೂಪ ಗುಟ್ಟಿನೊಳಾಪ ೨

ಹೊಂದಿ ಬದುಕಿರೋ ಪೂರ್ಣ ತಂದೆ ಸದ್ಗುರುಚರಣ
ಸಂಧಿಸೋ ಮಹಿಪತಿ ಘನವಂದಿಸಿ ಅನುದಿನ ೩

## ೫೫೧

ಏನೋ ಮನವೇ ನೀಹೀಂಗಾದಿ ಧ್ರುವ

ಏನೋ ಮನವೇ ನೀ ಹೀಂಗಾದಿ ।
ಸ್ವಾನಂದ ಸುಖ ತಿಳಿಯದೆ ಬಳದಿ ।
ಮಾನುಭವರ ವಿಡಿನಿಜ ಹಾದಿ ।
ಜ್ಞಾನದಲಳಿಯೋ ಭವ ವ್ಯಾಧಿ ೧

ಮಂದ ಮತಿತನ ಬಿಡು ಗುಣದಾ ।
ಹೊಂದೋ ಸದ್ಗುರುವಿನ ಪಾದಾ ।
ಛಂದದಿ ಪಡಿಯೋ ನಿಜ ಬೋಧಾ ।
ಸಂದೇಹ ಬಿಡಿಸೆಚ್ಚರಿಸುವದಾ ೨

ಹೊಗೆ ಅಗ್ನಿಯ ಮುಸುಕಿಹ ಪರಿಯಾ ।
ಜನದೊಳು ವಿವೇಕದ ಮಾಯಾ ।
ಬಿಗಿದಾವರಿಸಿಹುದು ನೋಯಾ ।
ಬ್ಯಾಗನೆ ತಿಳಿ ಗೆಲುವ ಉಪಾಯಾ ೩

ಮುಂದ ಹಾಕಿದ ಹೆಜ್ಜೆಯನು ।
ಹಿಂದಕ ತಿರುಗಿಸದಿರು ನೀನು ।
ನಿಂದಿಸಲೊಂದಿಸಲಾರೇನು ।
ಮುಂದಗಿಡದೆ ಬೆರಿ ವಸ್ತವನು ೪

ನಿನ್ನ ಸುದ್ದಿಯು ತಾ ನಿನಗಿಲ್ಲಾ ।
ಇನ್ನಾರೆ ತಿಳಿತನು ಸ್ಥಿರವಲ್ಲಾ ।
ಮುನ್ನಿನ ಪರಿಕೆಡುವುದು ಸಲ್ಲಾ ।
ಮನ್ನಿಸು ಮಹಿಪತಿ ಜನ ಸೊಲ್ಲಾ ೫

## ೫೫೨

ಏನು ಹೇಳಲಿ ನಿನಗ ಮನವೇ ನಾ ಇನ್ನೇನು ಹೇಳಲಿ ನಿನಗೆ
ಶ್ರೀನಾಥನಂಘ್ರಿಯ ನೀನೋಲೈಸದಿಹುದೇನೋ ಪ

ಮನುಷ್ಯದೇಹ ಧರಿಸಿ ಸದ್ಗತಿಯ ।
ಜ್ಞಾನದಾರಿ ತ್ಯಜಿಸಿ ನೀ ಭಕುತಿ ಸುಖ ।
ಖೂನವಿಲ್ಲದೆ ಚರಿಸಿ ।
ಏನೂ ಇಲ್ಲದೆ ವಿದ್ಯಾ ಮಾಟಕ ಭ್ರಮಿಸಿಹುದೇನಾ ೧

ವಿಷಯ ಸುಖ ಹರಿದು ಸಂಸಾರದಿ ।
ನಿಶಿದಿನದಲಿ ಸವೆದು ತಾಪತ್ರಯ ।
ಘಸಣಿಯೊಳಗ ಕುದಿದು ।
ಪಶುವಿನ ಪರಿಯಲಿ ಯಚ್ಚರ ಮರೆದಿಹುದೇನಾ ೨

ಇನ್ನಾರೆ ಹಿತವರಿಯೋ ಸದ್ಗುರುವಿನ ।
ಮನ್ನಿಸಿ ಗತಿ ಪಡಿಯೋ ಹರಿಯ ನಾಮವಾ ।
ಚನ್ನಾಗಿ ನಂಬಿ ನಡಿಯೋ ।
ಸನ್ನುತ ಮಹಿಪತಿ ಬೋಧಾಮೃತ ಸವಿಯದೇನಾ ೩

## ೫೫೩

ಕಾಡದೆ ಬೇಡದೆ ಕಂಗೆಡದೆ ಕೋ ಮನವೆ ನಿಜ ಸುಭಿಕ್ಷ
ನೋಡಕ್ಷಯದಲಿ ನೀಡನುದಿನ ದಯಮಾಡುವ
ಗುರು ಸಂರಕ್ಷ ಧ್ರುವ

ಅಳುಕದೆ ಬಳುಕದೆ ತುಳುಕದೆ ನಿಂದು ತಿಳಕೊ ನಿಜಸುಭಿಕ್ಷೆ
ಒಳಿತಾಗುವ ಒಳಕೊಂಡೇನೆಂದು ಹಿಡಿಯದಿರು ನೀ ಕಾಂಕ್ಷೆ
ಕೊಳಕ ಹುಳಕ ಮೊಳಕನೆಂದು ಮಾಡದಿರುಪೇಕ್ಷ
ನಾಳೆ ನಾಡದಿಂದ್ಯಾಗೆಂದು ಕಲ್ಪಿಸಿಕೊಬ್ಯಾಡಪೇಕ್ಷ ೧

ಲಜ್ಜೆ ಅಳಿದು ಗುರು ಶರಣವ ಹೊಕ್ಕು ಸರಕ್ಕನೆ ಕೋ ಸುಭಿಕ್ಷೆ
ಹೆಜ್ಜೆಜ್ಜಿಗೆ ಸುರಿಮಳೆಗರೆವುತಲದೆ ಗುರುಕರುಣದಕಟಾಕ್ಷ
ಬೆಜ್ಜರವಿಡಿದು ಸಜ್ಜನರೊಡನಾಶ್ರಯಿಸಿ ನಿಜಲಕ್ಷ
ಫಜ್ಜಿಗೆ ಬಂದುವರಿತ ಮ್ಯಾಲೆ ಕಂಜನಾಭನೆ ಸುಪಕ್ಷ ೨

ಬೇಡಿಸಿಕೊಳ್ಳದೆ ನೀಡುತಲಾನೆ ಭಾಸ್ಕರ ಗುರು ಸಮರ್ಥ
ನೀಡಿ ನಿಜನಿಧಾನವ ಕೊಟ್ಟು ಮಾಡುತಲಾನೆ ಹಿತಾರ್ಥ
ಬಡವರಾಧಾರೆನ್ನೊಡೆಯನೆ ಜಗತ್ರಯಕ್ಕೊಬ್ಬನೆ ಕರ್ತ
ಮೂಢ ಮಹಿಪತಿಗನುದಿನ ಬಿಡದೆ ನೀಡುತಾನೆ ಸಕಲಾರ್ಥ ೩

## ೫೫೪

ಕೇಳಿಕೊ ಗುರುಬುದ್ಧಿ ಮನವೆ ಕೇಳಿಕೊ ಗುರುಬುದ್ಧಿ
ಕೇಳಿ ನಡೆಯದಿದ್ದರೆ ನೀನು ಜನ್ಮಕ ಜಾರಿಬಿದ್ದಿ ಮನವೆ ಧ್ರುವ

ವೇದಕ ನಿಲುಕದ ಹಾದಿಯದೋರುವ ಸದ್ಗರುವಿನ ಸುಬುದ್ಧಿ
ಸಾಧಿಸಿ ನೋಡಲು ತನ್ನೊಳಗ ತಾ ಎದುರಿಡುವುದು ಸುಶುದ್ಧಿ
ಭೆದಿಸದಲ್ಲದೆ ತಿಳಿಯದು ಎಂದಿಗೆ ಆದಿ ತತ್ವದ ನಿಜ ಶುದ್ಧಿ
ಮೊದಲಿಗೆ ಸಾಧಿಸಿ ಕೇಳಿ ನಡೆದರೆ ಸದ್ಗುರು
ಸುಬೋಧದಲಿ ಗೆದ್ದಿ ೧

ತರಣೋಪಾಯಕೆ ಸಾಧನವೇ ಮುಖ್ಯ ಗುರುಬುದ್ಧಿಯ ವಿಶೇಷ
ಪರಗತಿ ಸಾಧನ ಪಡೆದೇನಂದರೆ ಗುರು ಮಾತ ಉಪದೇಶ
ಅರಿತು ನಡಿಯೊಳು ಅರವ್ಹಿನ ಮನೆಯೊಳು
ದೋರುದು ತಾ ಹರುಷ
ಎರಡಿಲ್ಲದ ಕೇಳಿಕೊಂಡರ ಹರಿದ್ಹೋಗುದು ಭವ ಬಂಧಪಾಶ ೨

ಕರುಣಿಸಿ ಕರೆದು ಬೀರುವ ನಿಜನುಡಿ ದೋರುವ
ಗುರು ಘನಸೌಖ್ಯ
ಸುರಮುನಿ ಜನರಿಗೆ ಬಲು ಅಗಮ್ಯದೋರುವದೆ ಆಶಕ್ಯ
ತರಳ ಮಹಿಪತಿ ಮನವೆ ಕೇಳು ಗುರುರಾಯನ ಸುವಾಕ್ಯ
ಶರಣು ಜನರಿಗೆ ಗುರುತಾಗಿದು ತಾ ಪರ ಗೆಲಿಸುವದು
ನಿಜಮುಖ್ಯ ೩

## ೫೫೫

ಕೇಳು ಕಂಡ್ಯಾ ಒಂದು ಮನವೇ । ಕೇಳು ಕಂಡ್ಯಾ ಪ

ಕೇಳು ಕಂಡ್ಯಾ ವಂದ । ಪ್ರೇಮ ಭಾವದಿಂದ
ಬಾಳು ದೀಪರಿಂದ ನಿನಗೆ ಬಂದಕೀದೆ ಛಂದ ೧

ವಿಡಿದು ಗುರುಪಾದಾ ಪಡಿಯೋ ನಿಜಬೋಧಾ ।
ಕಡಿದು ಕಾಮ ಕ್ರೋಧ । ನೀಗು ವ್ಯವಾಧಾ ೨

ಅನ್ಯ ಮಾರ್ಗ ನೋಡಾದಿರುವ ಬಲಿದೃಢಾ ।
ಘನಗುರು ಗೂಢಾ । ವಿದ್ಯೆ ಸಾಧಿಸೆಲೋ ಮೂಢ ೩

ದೊಡ್ಡವ ನಾನೆಂಬ ದೋರದೆ ನೀಡಂಭ ।
ಜಡ್ಡಾಗದೇ ಗುಂಭಿ । ನಿಜ ನೋಡಿ ನಿರಾಲಂಬ ೪

ಮಹಿಪತಿ ಜನಸೊಲ್ಲ ಹಾದಿಯಂತಿದಲ್ಲ
ಮಹಿಮನೇ ಬಲ್ಲನಿದರ ಸವಿಸುಖವೆಲ್ಲ ೫

## ೫೫೬

ಕೇಳೆನ್ನ ಚಿನ್ನಾ ಮನವೇ ಪ

ಮನವೇ ಮೈಮರೆವದು ಗುಣವೇ ।
ಮತ್ತು ಬಹ ಈ ದಿನವೇ ।
ವ್ಯರ್ಥದ ಗುಣವಾದನುವೇ ೧

ಭ್ರಾಂತರ ಪರಿನಾನಾ । ಮಾ ।
ರ್ಗಾಂತರಾ ಸೇರಿ ಹೋಗದೆ ।
ಸಿಂತರ ಬ್ಯಾಗ ಕೂಡಲೋ ಸಂತರಾ ೨

ಕುದಿವ ತಾಪವಳಿದು ಮೃದು ।
ವಾದಾ ಮಹಿಪತಿ ಪದವಾ ।
ವಿಡಿದು ಪಡಿ ಮುದವಾ ೩

## ೫೫೭

ಕೇಳು ಮನವೇ ನೀನು । ಅನವರತಾ ।
ಬಾಳು ಹಿರಿಯ ನಂಬಿರು ತಾ ಪ

ಸದ್ಗುರು ದಯ ಪಡೆದು । ಭವದಲಿ
ಸದ್ಗತಿ ಪಡಿ ಭಾಗ್ಯದಲಿ ೧

ಹಲವು ಹಂಬಲ ತ್ಯಜಿಸಿ । ದೃಢದಿಂದ ।
ಬಲಗೊಳ್ಳುಗುರು ಪದದ್ವಂದ್ವ ೨

ಉದರ ಕುದಿಯಗಾಗಿ । ಕಂಡವನಾ ।
ವದಕೆರಗಲು ಬಹದೇನಾ ೩

ಇಂದು ಸುಖಿಸು ಹೊಂದಿ ಕೃಷ್ಣಯ್ಯನ ।
ಸನ್ನುತ ಮಹಿಪತಿ ಚರಣಾ ೪

## ೫೫೮

ತಿಳಿಯೊ ಮನವೆ ನಿಜವಸ್ತು ಖೂನ
ಅಳಿಯೊ ದೇಹ ನಾನೆಂಬುವಭಿಮಾನ
ಉಳುವ ಉಪಾಯ ಮಾಡೊ ನೀ ಸಾಧನ
ಹೊಳಿಯೊ ಸದ್ಗುರು ಪಾದದಲಿ ನೀ ಪೂರ್ಣ ೧

ಹುಟ್ಟಿ ಬಂದೇನು ಪುಣ್ಯ ಪುರುಷಾರ್ಥ
ಘಟ್ಟಿಗೊಳ್ಳದೆ ನಿಜ ಸುಹಿತಾರ್ಥ
ನಿಷ್ಠೆ ಹಿಡಿಯದನ ಜನ್ಮ ವ್ಯರ್ಥ
ಮುಟ್ಟಿ ತೋರುವ ಶ್ರೀ ಗುರು ಪರಮಾರ್ಥ ೨

ಗುರ್ತು ತಿಳಿಯೊ ಜನುಮಕೆ ಬಂದ ಮ್ಯಾಲೆ
ಮರೆತು ಮೈಮರೆವದೇನು ತಾ ಮೇಲೆ
ಅರ್ತು ನಡೆವದು ನಿನಗೇನು ಸೋಲು
ಕರ್ತು ಸದ್ಗುರು ಸ್ಮರಿಸೋ ಆವಾಗಲೂ ೩

ಎಲ್ಲಾರಂಥ ತಾನಲ್ಲೊ ಗುರುನಾಥ
ಸುಲ್ಲಭದಿಂದ ದೋರುವ ಸುಪಥ
ಅಲ್ಲೆ ದೋರ್ವದು ಸಕಲ ಹಿತಾರ್ಥ
ಬಲ್ಲ ಮಹಿಮರೆ ತಿಳಿವರೀ ಮಾತ ೪

ಭಾಸುತದೆ ಭಾಸ್ಕರ ಕೋಟಿ ಕಿರಣ
ಲೇಸಾಗಿ ಹೋಗೊ ಗುರುವಿಗೆ ಶರಣ
ದಾಸಮಹಿಪತಿ ಸ್ವಾಮಿ ದೀನೋದ್ಧಾರಣ
ಭಾಸಿ ಪಾಲಿಸುವ ತಾ ಸುಕರಣ ೫

## ೫೫೯

ತಿಳಿಯೊ ಮನವೆ ಯುಕ್ತಿಯ ಕಳಿಯೋ ನೀ
ವಿಷಯಾಸಕ್ತಿಯ ಬಲಿಯೊ ಭಕ್ತಿಯ ಧ್ರುವ

ಕಣ್ಣು ಕಾಣಿಸುವಾಗ ಪುಣ್ಯ ಪಥ ಹೊಂದು ಈಗ
ಹಣ್ಣು ಶರೀರಾಗದಾಗ ನಿನ್ನೊಳು ತಿಳಿ ಬ್ಯಾಗ ೧

ಬಲವು ದೇಹಲಿದ್ದಾಗ ಬಲಿಯೊ ಭಾವ ಭಕ್ತಿಲೀಗ
ನೆಲೆ ನಿಭಗೊಂಬುವ್ವಾಂಗೆ ಸಲೆ ಮರೆಹೊಗು ಹೀಂಗ ೨

ಬಂದ ಕೈಯಲಿ ಬ್ಯಾಗ ಹೊಂದು ಸದ್ಗುರು ಪಾದೀಗ
ಎಂದೆಂದಗಲದ್ವಾಂಗ ಸಂಧಿಸು ಘನ ಹೀಂಗ ೩

ಸೋಹ್ಯದೋರುವ ಕೈಯ ಧ್ಯಾಯಿಸೊ ನೀ ಶ್ರೀಹರಿಯ
ನ್ಯಾಯ ನಿನಗೆ ನಿಶ್ಚಯ ಇಹಪರಾಶ್ರಯ ೪

ಗುರುಪಾದ ಕಂಡಾಕ್ಷಣ ಎರಗೊ ಮಹಿಪತಿ ಪೂರ್ಣ
ಹರಿಯೊ ಅಹಂಭಾವಗುಣ ಬೆರಿಯೊ ನಿರ್ಗುಣ ೫

## ೫೬೦

ನಾಚಿಕಿಲ್ಲೆ ಮನವೆ ಲೋಚಿ ಬಿಟ್ಟ ದನವೆ
ಊಚ ನೀಚಕಾಗಿ ಹೊಡೆದಾಡುದಿನ್ನು ಗುಣವೆ ೧

ಹೇಸಿಕಿಲ್ಲೆಂಬುದು ವಿಷಯದೊಳು ನಿಂದು
ವ್ಯಸನಕಾಗಿ ಘಸಿಗೆ ಬೀಳುವದೆ ನಿನ್ನ ಕುಂದು ೨

ಜನಿಸಿ ಯೋನಿಯಮುಖ ಏನು ಕಂಡ್ಯೊ ಸುಖ
ಶ್ವಾನಸೂಕರದ ಜನ್ಮ ತಾಳಿದಿ ಅನೇಕ ೩

ಶುದ್ಧಿ ಇಲ್ಲ ನಿನಗೆ ಬಿಟ್ಟು ಭವ ಬವಣಿಗೆ
ಬುದ್ಧಿ ಇದೆ ಶರಣುಹೋಗು ಸದ್ಗುರುವಿಗೆ ೪

ಪಿಡಿದು ಗುರುಪಾದ ಪಡಿಯೊ ನಿಜಬೋಧ
ಮೂಢ ಮಹಿಪತಿ ನಿನಗಿದೆ ಸುಪ್ರಸಾದ ೫

## ೫೬೧

ನಿನ್ನವ ನಾನು ಎನ್ನಯ್ಯ ನೀನು
ನಿನ್ನಿಂದೆನಾನಾ ಎಂದೆಂಬೆ ನಾನು ಧ್ರುವ

ನಿನ್ನೊಳು ದಾವ ನಾನು ಎನ್ನೊಳಗಿಹೆ ನೀನು
ನಿನ್ನಿಂದೆ ಜೀವಿಸುವನಾಗಿಹೆನು ೧

ನನ್ನವಿಡಿದು ನಾನು ಎನ್ನ ಬಾಹ್ಯಾಂತ್ರ ನೀನು
ಎನ್ನ ಸಕಲ ಸಾಹ್ಯ ಸೂತ್ರ ನೀನು ೨

ಎನ್ನ ಪ್ರೇರಕ ನೀನು ನಿನ್ನ ಪ್ರೀತ್ಯರ್ಥ ನಾನು
ನಿನ್ನಿಂದಾದೆ ಪವಿತ್ರ ಪಾತ್ರ ನಾನು ೩

ನೀನೆ ಸ್ವಯಂ ಭಾನು ನಿನ್ನಿಂದುದಯ ನಾನು
ನಿನ್ನಿಂದಾದ ಮಹಿಗೆ ಪತಿಯೇ ನೀನು ೪

## ೫೬೨

ನಿನ್ನೊಳು ನೋಡಾನಂದವ ಎನ್ನ ಮನವೆ
ಚೆನ್ನಾಗಿ ಚಿನ್ಮಯವ
ಇನ್ನೊಂದಿಹವೆಂಬನ್ಯ ಪಥವಳಿದು
ಉನ್ಮನಿಯೊಳು ಘನಸುಖ ಅನುಭವಿಸುತ ಧ್ರುವ

ಕಂಗಳ ಕೊನೆಯ ಮೆಟ್ಟಿ ಮುಂಗಡಿಯಲಿಹ
ಮಂಗಳಾತ್ಮಕನ ನೋಡಿ ಲಂಘಿಸಿ ಮೂಲಸ್ಥಾನವ
ತುಂಗ ವಿಕ್ರಮನ ಸಂಗ ಸುಖವನರಿದು
ಹಿಂಗದೆ ಅನುದಿನ ಇಂಗಿತವಾಗಿ ನೀ
ಗಂಗೆಯೊಳು ಜಲ ಬೆರೆದಾ ಸುಸಂಗದಿ ೧

ನಾನು ನಾನೆಂಬದಳಿದು ನಿನ್ನೊಳು ನೀನೆ
ಏನೆಂದು ತಿಳಿದು ನೋಡು ಆನಂದೋ ಬ್ರಹ್ಮದಾಟವು
ತಾನೆ ತಾನಾಗಿ ತನುವಿನೊಳು ತೋರುವದು
ಘನಗುರುವಚನಾನುಭವದಲಿ ಸೇವಿಸಿ
ಸ್ವಾನುಭವದ ಸುಖದಲಿ ಲೋಲ್ಯಾಡುತ ೨

ಮರೆದು ಮಾಯದ ಮಾಟವ ಅರಿತು ನೋಡು
ಬೆರೆದು ದಾಂಟಿ ತ್ರಿಕೂಟವ ತೋರುವ ದಿವ್ಯಭಾವವ
ತಾರಕಗುರು ಸಾರುವ ಕರುಣ ನೋಟವ
ಅರವಿನೊಳಿರು ಮಹಿಪತಿ ಗುರುಪಾದದಿ
ಪರಮಾನಂದದಿ ಸುಖ ಸೂರ್‍ಯಾಡುತ     ೩

## ೫೬೩

ನೆಲೆಯಗೊಳ್ಳಿರೊ ಮನವ ಬಲಿದು ನೆಲೆಯಗೊಳ್ಳಿರೊ
ನೆಲೆಯಗೊಳ್ಳಿರಯ್ಯ ನೀವು ಬಲಿದು ಭಾವಭಕ್ತಿಯಿಂದ     ಧ್ರುವ
ಹಲವು ಮಾತಾಡಿ ನಿಮ್ಮ ಕುಲವ ಚಲವವೆಂದು ಎನಿಸಬ್ಯಾಡಿ
ಹೊಲಬು ತಿಳಿದು ನಿಮ್ಮ ನೆಲೆಯನಿಭವನರಿತು ನೋಡಿರೊ     ೧

ಗುಟ್ಟು ತಿಳಿಯಲರಿಯದೆ ಬೊಟ್ಟೆಣಿಸಿ ದಣಿಯಬ್ಯಾಡಿ
ಮಟ್ಟಮಾಡಿ ಮನವ ನಿಜಗಟ್ಟಿಗೊಳ್ಳಿರೊ     ೨

ನಿಲವು ತಿಳಿದು ನೆಲಯಗೊಂಡು ಇಳಿಯೊಳಗೆ ಮಹಿಪತಿಯು
ಒಲಿದು ದಯಮಾಡಿ ಸಲಹುತಿಹ ಗುರು ಕಾಣಿರೊ     ೩

## ೫೬೪

ನೋಡು ನಿನ್ನೊಳು ನಿನ್ನುಗಮ ಮನವೆ     ಧ್ರುವ

ನೋಡು ಒಡನೆ ಖೂನ
ಬಿಡದೆ ಸಾರುತದೆ ನಿಗಮಾ
ದೃಢ ಭಾವದಲಿ ಪಡೆದು ಸದ್ಗುರು ದಯ
ವಿಡಿದು ಸೆರಗ ಕುಡುವದಿದು ಸುಗಮ     ೧

ಉಗಮಸ್ಥಾನದ ಉದ್ಭವ ತಿಳಿಯದೆ
ಬಿಗಿದ್ಹೆಮ್ಮಲಿಹುದ್ಯಾಕೆ

ಬಗೆ ಬಗೆ ಸಾಧನ ಶ್ರಮಗೊಂಡು
ಜಗಜಾಲದಿ ಭ್ರಮಿಸುವುದಿದೇಕೆ ೨

ನಿರ್ಮಳ ನಿಶ್ಚಳ ನಿಜಘನವರಿತು
ಕರ್ಮ ಬಂಧನವ ಗೆಲಿಯಾ
ಮರ್ಮಿಲಿ ಮಹಿಪತಿ ಗುರುಯೋಗಧರ್ಮದಿ
ನಿರ್ಮನದಲಿ ನಿಜಗೂಡ ಮನವೇ ೩

## ೫೬೫

ನೋಡು ಮನವೆ ನಿನ್ನೊಳಾಡುವ ಹಂಸ
ಇಡಾಪಿಂಗಳ ಮಧ್ಯನಾಡಿವಿಡಿದು ಧ್ರುವ

ಆಧಾರವಂ ಬಲಿದು ಸ್ವಾಧಿಷ್ಠಾನವ ದಾಟಿ
ಹಾದಿವಿಡಿದು ನೋಡು ಮಣಿಪುರದ
ಒದಗಿ ಕುಡುವ ಅನಾಹತ ಹೃದಯಸ್ಥಾನವ
ಸಾಧಿಸಿ ನೋಡುವದು ವಿಶುದ್ಧವ ೧

ಭೇದಿಸಿ ನೋಡುವದಾಜ್ಞಾಚಕ್ರ ದ್ವಿದಳ
ಸಾಧಿಸುವದು ಸುಖ ಸಾಧುಜನ
ಅಧರದಲಿಹ್ಯ ತಾ ಆಧಿಷ್ಠಾನವ ನೋಡು
ಆಧಿಪತಿ ಆಗಿಹಾಧೀನ ದೈವವ ೨

ಮ್ಯಾಲಿಹ್ಯ ಬ್ರಹ್ಮಾಂಡ ಸಹಸ್ರದಳ ಕಮಲ
ಹೊಳೆಯುತಿಹ ಭಾಸ್ಕರ ಪ್ರಭೆಯ ಕೂಡಿ
ಮೂಲಸ್ಥಾನದ ನಿಜ ನೆಲೆ ನಿಭವ ನೋಡುವ
ಬಾಲಕನೊಡೆಯ ಮಹಿಪತಿ ಸ್ವಾಮಿಯ ೩

## ೫೬೬

ನೋಡು ಮನವೆ ನಿನ್ನೊಳಾತ್ಮನ ನೋಡು ಮನವೆ ಧ್ರುವ

ಸಾಧುಸಂಗವ ನೀ ಮಾಡಿ ಭೇದ ಬುದ್ಧಿಯ ಹೋಗಾಡಿ
ಆದಿತತ್ವವ ನೀ ನೋಡಿ ಸದಮಲಾನಂದ ಕೂಡಿ ೧

ಕಾಮಕ್ರೋಧವ ಕಳೆದು ಮಮತಾ ಮಾಯವನಳಿದು
ತಾಮಸ ತಾಪ ತೊಳೆದು ಶಮದಮಾದಿ ತಿಳಿದು ೨
ನಾನು ನೀನೆಂಬುದು ನೀಗಿ ಜ್ಞಾನದಿಂದ ಗುಪ್ತನಾಗಿ
ಭಾನುಕೋಟಿತೇಜನಂಘ್ರಿ ಬೆರೆದು ನಿಶ್ಚಿಂತನಾಗಿ ೩

ಅವಿದ್ಯುಪಾಧಿಯ ಜರಿದು ಮೂವಿಧ ಮದ ಮುರಿದು
ಪವಿತ್ರ ಪ್ರಣವರಿದು ಸುವಿದ್ಯ ಸುಖಬೆರೆದು ೪

ಬಾಹ್ಯಾಂತ್ರದೊಳಿಹ ಪೂರ್ಣ ಮಹಾಗುರುನಿರಂಜನ
ಇಹ ಪರತ್ರ ಸಾಧನ ಮಹಿಪತಿ ಅಂತರಾತ್ಮನ ೫

## ೫೬೭

ನಂಬಬಾರದೆ ಮನವೆ ನಂಬಬಾರದೆ
ನಂಬಿದವರ ಕಾವ ದೈವ ಅಂಬುಜಾಕ್ಷನೀತನೆಂದು ಧ್ರುವ

ನಂಬಿದ ಪ್ರಲ್ಹಾದಗ ತಾಂ ಸ್ತಂಭದೊಳು ಮೂಡಿ ಬಂದು
ಹಂಬಲಿಸಿ ದಲ್ಹೊದಗಿ ಇಂಬವಾದನೀತನೆಂದು ೧

ನಾಮ ನಂಬಬಾರದೆ ನೀ ಕಾಮಧೇನುವೆಂದು ಪೂರ್ಣ
ನೇಮದಿಂದ ಸಲಹುತಿಹ್ಯ ಸ್ವಾಮಿ ಸರ್ವೋತ್ತಮನೆಂದು ೨

ದೀನ ಮಹಿಪತಿಸ್ವಾಮಿ ಭಾನುಕೋಟಿತೇಜಪೂರ್ಣ
ಮನದಪೇಕ್ಷೆ ಪೂರೈಸುವ ಘನಸುಖದಾಯಕನೆಂದು ೩

## ೫೬೮

ಬಿಡದೆ ಭಜಿಸೊ ಮನವೆ ದೃಢಭಾವದಿ ಪೂರಿಸೊ
ಒಡನೆ ನಿನ್ನೊಳು ತಿಳಿದು ಸ್ವಾಮಿ ಸದ್ಗುರುಮೂರ್ತಿ
ಶ್ರೀಪಾದಾರಾಧಿಸೊ ಧ್ರುವ

ನಿತ್ಯಾನಿತ್ಯ ಆವದೆಂದುದ್ದಿತ್ಯರ್ಥ ಶೋಧಿಸೊ
ಪಥ್ಯವಾಗುವ ಸತ್ಯಶಾಖತ್ವಪಥವ ಸಾಧಿಸೊ
ಕೃತ್ಯಾಕೃತ್ಯವಾಗುವ ನಿತ್ಯನಿಜವು ಭೇದಿಸೊ
ಉತ್ತಮೋತ್ತಮವಾದ ವಸ್ತುಮಯದೊಳು ನೀ ಸಂಧಿಸೊ ೧

ಇದೆ ನೋಡು ಹಿತವು ನಿನ್ನು ಸುಪಥಸಾಧನ
ಸಾಧಿಸಿಗೊಡುವ ಸ್ವಾಮಿ ಸದ್ಗುರು ಪತಿತಪಾವನ
ಭೇದಿಸಿ ನೋಡಲಕ್ಕೆ ನಿನ್ನೊಳಗಾಗುವದು ಉನ್ಮನ
ಸದಮಲಾನಂದ ವಸ್ತು ಪರಿಪೂರ್ಣ ತೋರುತ್ತದೆ
ತಾಂ ನಿಧಾನ ೨

ಬೆರಿಯೊ ಭಾವಭಕುತಿವಿಡಿದು ಹಿಡಿಯೊ ಹರಿ ಪಾದವ
ಸುರಿಯೊ ಸಾರ ಸವಿಯೊ ಸುಖವ ಅನಭವಾಮೃತವ
ಹರಿಯೊ ಪಾಶ ಬೀಳುವ ಭವಜನ್ಮಮೃತ್ಯುವ
ನೆರಿಯೊ ಮಹಿಪತಿಸ್ವಾಮಿ ವಸ್ತು ಪರಾತ್ಪರವ ೩

## ೫೬೯

ಬಿಡುಮನವೆ ಬಿಡದಿಹ್ಯ ಸಂಸಾರ
ಪಡಕೊಂಬುದು ಮಾಡು ನೀ ಸುವಿಚಾರ ೧

ವಿಚಾರದೊಳಗದ ಬಲು ವಿವೇಕ
ಸೂಚಿಸಿಬಾಹುದು ಸ್ವಾತ್ಮದ ಸುಖ ೨

ಸ್ವಾತ್ಮದ ಸುಖ ತಿಳಿದವ ಸ್ವತಃಸಿದ್ಧ
ಮತ್ತೆಲ್ಲಿಹದವಗೆ ಭವಬಂಧ ೩

ಭವಬಂಧವ ತಿಳಿಯಲುಪಾಯ
ಭುವನದಲ್ಯದ ಶುಕನಳಿಕನ್ಯಾಯಾ ೪

ನ್ಯಾಯವ ತಿಳಿದರೆ ನೋಯವನೆಂದು
ಶ್ರಯ ತಿಳಿಯಲು ತಾ ಬಂಧು ೫

ಬಂಧು ಹಗೆಯು ತನಗೆ ತಾಯೆಂದು
ಸಂಧಿಸಿ ಪಾರ್ಥಗ್ಹೇಳಿದ ಹರಿ ಬಂದು ೬

ಹರಿವಾಕ್ಯವೆ ಗುರುಗುಹ್ಯದ ಗುಟ್ಟು
ಪರಮಾನಂದದ ಹೆಜ್ಜೆಯ ಮೆಟ್ಟು ೭

ಹೆಜ್ಜೆಲೆ ನಡೆವನು ಕೋಟಿಗೊಬ್ಬವನು
ಸಜ್ಜನ ಶಿರೋಮಣೆನಿಸಿಕೊಂಬುನು ೮

ಶಿರೋಮಣೆನಿಕೊಂಬುದು ಗುರುಕರುಣ
ಗುರುಚರಣಕೆ ಬ್ಯಾಗನೆಯಾಗು ಶರಣು ೯

ಶರಣ ಹೊಕ್ಕವಗೆಲ್ಲಿಹುದು ಮರಣ
ಮರಣಕ ಮರಣವ ತಂದವ ಜಾಣ ೧೦

ಜಾಣನೆ ಜನ್ಮರಹಿತ ವಾದವನು
ಜನವನ ಸಕಲ ಸಮವಗಂಡವನು ೧೧

ಸಮಗಂಡವಗಳದಿಹ್ಯ ಶ್ರಮವೆಲ್ಲಾ
ರಾಮ ವಸಿಷ್ಠರೊಳಾಡಿದ ಸೊಲ್ಲ ೧೨

ಸೊಲ್ಲಿಗೆ ಮುಟ್ಟಿದವ ಪ್ರತಿಯಿಲ್ಲ
ಎಲ್ಲರೊಳಗ ವಂದಾದವ ಬಲ್ಲ ೧೩

ಬಲ್ಲವನೆ ಬಲ್ಲನು ಬಯಲಾಟ
ಎಲ್ಲರಿಗಿದೆ ಅಗಮ್ಯದ ನೋಟ ೧೪

ನೋಟಕ ನೀಟ ಮಾಡಿದವನು ಧನ್ಯ
ನೀಟಿಲೆ ನಡೆದವ ಕೋಟಿಗೆ ಮಾನ್ಯ ೧೫

ಕೋಟಿಗೆ ಒಬ್ಬನು ತತ್ವಜ್ಞಾನಿ
ನೋಟವಗಂಡಿಹ್ಯ ಮಹಾ ಸುಜ್ಞಾನಿ ೧೬

ಸುಜ್ಞಾನಿಗೆ ಘನಮಯ ಸುಕಾಲ
ಸುಗಮ ಸುಪಥವಾಗಿಹುದನುಕೂಲ ೧೭

ಅನುಕೂಲದ ನಿಜ ಮಾತನೆ ಕೇಳು
ಅನುದಿನ ಘನಗುರು ಸೇವಿಲೆ ಬಾಳು ೧೮

ಬಾಳಿ ಬದುಕುವದು ಈ ಪರಿ ಲೇಸು
ಕಳೆವುದು ಮಿಕ್ಕಿನ ಭ್ರಾಂತಿಯ ಸೋಸು ೧೯

ಸೋಸ್ಹಿಡಿದರ ಇದೊಂದೇ ಸಾಕು
ವೇಷವದೋರುವದ್ಯಾತಕೆ ಬೇಕು ೨೦

ಬೇಕೆಂಬ ಬಯಕೆಯ ಈಡ್ಯಾಡು
ಸೋಕಿ ಶ್ರೀ ಸದ್ಗುರು ಪಾದದಿ ಕೂಡು ೨೧

ಕೂಡಿರು ಮಹಿಪತಿ ಮನವೆ ನೀ ಪೂರ್ಣ
ಪಡೆವುದಿದೇ ಸ್ವಸುಖ ಸಾಧನ ೨೨

## ೫೭೦

ಭಾವದ ಬಯಲಾಟ ಭಾವಿಕ ಬಲ್ಲನಿದರ ನೋಟ ಧ್ರುವ

ತೋರಿ ಕೊಡುವುದಲ್ಲ ತೋರಿಸಿ ತಾ ಕೊಂಬುವದಲ್ಲ
ತೋರಿಕೆಗೆರಡಿಲ್ಲ ತೋರಿ ತೋರದದರೊಳಾಡುವದೆಲ್ಲ ೧

ಬಯಲಿಗೆ ನಿರ್ಬೈಲು ಬಯಲಿಲಿದ್ದವ ಬಲ್ಲಿದರ್ಹೋಯಿಲು
ಶ್ರೇಯ ಸುಖದ ಕೀಲು ಜೈಸಿಹ ಮನದವಗಿದು ಮೇಲು ೨

ಜ್ಞಾನರಹಿತ ಕೂಟ ಮನೋನ್ಮಕಾಗಿಹ್ಯ ಮುಗುಟ
ಘನಗುರು ದಯನೋಟ ಅನುದಿನ ಮಹಿಪತಿ ಸುಖದೂಟ ೩

## ೫೭೧

ಭಾವ ನೆಲೆಗೊಳ್ಳಿ ಸಾಧಿಸಿ ದೃಢದಲ್ಲಿ
ದೈವ ಪ್ರಕಟಾಗಿ ಒಲಿವುದು ಘನದಲಿ ಧ್ರುವ

ಮಾಡಿ ಚಿತ್ತಶುದ್ಧ ನೋಡಿ ಸ್ವತಃಸಿದ್ಧ
ಗೂಢ ಗುಪ್ತ ಘನ ಕೈಗೂಡಿ ತಾಂ ಪ್ರಸಿದ್ಧ ೧

ನಡಿಯ ಪಡಕೊಳ್ಳಿ ಸದ್ಗುರು ದಯದಲಿ
ಕಡೆದು ಹೋಗುವದು ಭವಪಾಶ ಮನದಲಿ ೨

ಭಾವಕತಿ ಪ್ರಿಯ ಭಾನುಕೋಟಿ ಉದಯ
ಪಾವನ್ನಗೈಸುತಿಹ ನೋಡಿ ಮೂಢ ಮಹಿಪತಿಯ ೩

## ೫೭೨

ಭೇದಿಸಿ ನೋಡು ಮನವೆ ನಿಜ ಅನುದಿನ ಸಾಧಿಸಿ
ಘನ ತನ್ನೊಳಗೆ
ತುದಿಮೊದಲಿಲ್ಲದ ಸದಮಲ ಬ್ರಹ್ಮವು ಸಂಧಿಸಿ
ತುಂಬಿಹದು ನಿನ್ನೊಳಗೆ ಧ್ರುವ

ಓದಿ ಕೇಳಿ ಮರುಳಾದ್ಯೊ ಮನವೆ ಸಾಧಿಸಲಿಲ್ಲ ಸ್ವರೂಪ
ವೇದವ್ವೋದಿ ವಿವದಕೆ ನೀನು ಸಾಧಿಸಿದೊ ಬಲುಕೋಪ
ಭೇದವಿಡಿದು ಬಾಧೆಗೆ ಗುರಿಯಾಗಿ ಆದಿ ನಿನಗೆ ನೀ ಪಾಪ
ಹಾದಿದೋರಿಕೊಡುವನು ಸದ್ಬೋಧಿಸಿ ಮೇದಿನಿಯೊಳು
ಘನಗುರು ಕುಲದೀಪ ೧

ದೇಹದ ಒಳಗಿನ ದೇವರ ತಿಳಿಯದೆ ಬಾಹ್ಯ ರಂಜನಗೆದೆರದ್ಯೊ
ಸೋಹ್ಯವರಿಯದೆ ಶ್ರೀಹರಿ ಭಕ್ತಿಯ ಅಹಂಭಾವದಿ ಮೆರೆದ್ಯೊ
ದೇಹಾಭಿಮಾನದಲಿ ಸೋಹಂಭಾವದ ವಾರ್ತೆಯ ಜರಿದ್ಯೊ
ಸಾಹ್ಯ ಮಾಡುವ ಶ್ರೀ ಗುರುಮೂರ್ತಿಯ ಧ್ಯಾಯಿಸುವ
ಸವಿ ಸುಖವನು ಮರೆದ್ಯೊ ೨

ಕನಸುದೋರುವ ಜನ ಪ್ರಪಂಚವ ನೆನೆಸಿ ಬಯಸುವದ್ಯಾಕೆ
ಖೂನ ತಿಳಿಯದೆ ಸತ್ತು ಹುಟ್ಟಿ ಜನಿಸಿ ಬಾಹುದು ಯಾಕೆ
ಹೀನಯೋನಿಯ ಮುಖದಲಿ ಬೀಳುವ ದಣುವಿಕಿ ನಿನಗಿದು ಬೇಕೆ
ಸೆಣಸ್ಯಾಡುವ ಕಾಮಾಟಿಕೆ ಅನುದಿನ ಅನುಭವಿಸಲು
ನಿನಗಿದು ತಾ ಸಾಕೆ ೩

ಹಾದಿತಪ್ಪಿ ನಡೆವದು ವೇದಾಂತದ ಇದು ನಿನಗುಚಿತೆ
ಸಾಧು ಸಜ್ಜನರನುಸರಿಸದೆ ತಾ ಇಹುದೊಂದು ಸ್ವಹಿತೆ
ಬೋಧಿಸಿ ಗತಿಗೈದಿಸುವ ಗುರುವಾಕ್ಯವು ಅದು ತಾ
ಗಾದಿಯ ಮಾತೆ
ನಾದಬಿಂದು ಕಳೆಯೊಳು ನಿಜ ತಿಳಿಯದೆ ಮೇದಿನಿಯೊಳು
ಬಂದುದು ಪುರುಷಾರ್ಥೆ ೪

ಶರಣ್ಹೊಕ್ಕರ ಕರುಣಿಸಿ ನೋಡುವ ಎರಡಿಲ್ಲದೆ ಗುರುನಾಥ
ಕರವಿಡಿದು ಪಾರನೆ ದಾಟಿಸುವಾ ಸುರಮುನಿಜನ ಸೇವಿತ
ತರಣೋಪಾಯದ ಸಾಧನದೋರುವ ತರಳ ಮಹಿಪತಿ ದಾತ
ಸರಿಗಾಣೆನು ವರ ಗುರುದಯ ಕರುಣಕೆ ಎರಗೋ
ಮನವೆ ನಿನಗಿದು ಸುಪಥ ೫

## ೫೭೩

## ವಚನ

ಮನವು ಬಿಲ್ಲನೆ ಮಾಡಿ
ತನುವು ಹೆದಿಯನೆ ಕಟ್ಟಿ
ಅನುಭವದ ಅಂಬಿನಲಿ
ಜನನ ಮರಣದ ಗುರಿಯ ಕೆಡಹಿದಾ
ಜ್ಞಾನಸಾಗರ ಗುರುನಾಥನೆಂದು
ಸ್ತುತಿಸಿದಾ ಮಹಿಪತಿಯು ।

## ೫೭೪

ಮನವೆ ಎಂದೆಂದಿಗೆ ಬಿಡಬ್ಯಾಡ ಹೊಂದಿ
ನಿಜವತಂದೆ ಗುರುಕೃಪೆಯಿಂದ
ವಂದಿಸಿ ಸದಮಲ ಬ್ರಹ್ಮಾನಂದವ ಸಂಧಿಸಿ
ಸುಖಿಯಾಗಿರೊ ಮನವೆ ೧

ದೊರ್ಕದು ಎಂದಿಗೆ ಮೂರ್ಖರಿಗಿದು ತಾ ತರ್ಕರಹಿತ ಪರವಸ್ತು
ಗರ್ಕನೆ ತಿರುಗಿ ಸರ್ಕನೆ ನೋಡಿ ಅರಿಕ್ಕುಳ್ಳವಗರ್ಜಿತ ನಿಜಧನವು ೨

ಸಾಧಿಸಿ ಜನ್ಮಾಂತರದ ಪುಣ್ಯವು ಒದಗಿ ಬಂತಿದಿರಾಗಿ
ಬೊಧಕ ಮಹಿಪತಿ ಗುರು ಶ್ರೀಪಾದವು
ಭೇದಿಸಿ ಬೆರಿ ಚೆನ್ನಾಗಿ ಮನವೆ ೩

## ೫೭೫

ಮನವೆ ನೋಡೋ ನಿನ್ನೊಳಗಿಹ್ಯ ನಿಜವ ಪಡಿದೊ ಕೂಡೋ
ಒಡನೆ ಸದ್ಗುರು ಶ್ರೀಪಾದ ಗೂಢವಾಗಿಹ ಧನ
ಗೂಡಿನೊಳರಿಯದೆ ನಾಡಗೊಡವೆ ನಿನಗ್ಯಾಕೊ ಮನವೆ ಧ್ರುವ

ಗೂಢವಾಗಿಹ ಭಕ್ತಿ ನಾಡಿಗೆ ಹೇಳದೆ ನೋಡಿ ನಿನ್ನೊಳು
ಸುಖಿಯಾಗೊ
ನಡೆನುಡಿ ವಂದನೆಮಾಡಿ ದೃಢದಲಿ ಬಿಡದೆ ಸುಪಥವ ನೀ
ಕೂಡೊ ಮನವೆ ೧

ಮನ ಕರಗಿ ಘನ ಸಮರಸವಾಗೊ ತನುವಿನ ಕಳವಳಗಳೆದು
ಉನ್ಮನವಾಗದೆ ಅನುದಿನ ಜಗದೊಳು ಜನರಂಜನೆ
ತೋರಿದ ಫಲವೇನು ೨

ತನ್ಮಯ ತಾರಕ ಬ್ರಹ್ಮಾನಂದವು ಭಿನ್ನವಿಲ್ಲದೇ ನೀ ನೋಡೊ
ಉನ್ಮತ್ತರಿಗೆ ತಾ ದೊರೆಯದು ಎಂದಿಗೆ ಸನ್ಮತ
ಸುಖಸಾರವಿದು ಮನವೆ ೩

ಅಲ್ಪದೆ ಮಹಿಪತಿ ಮನವೆ ಆಶಾಪಾಶಕೆ ಸಿಲುಕಿಲಿಬ್ಯಾಡೊ
ಕಲ್ಪನೆ ಕೋಟಿಲೆಗ್ಹೊಂದದೆ ನಿರ್ವಿಕಲ್ಪ ಸಮಾಧಿಯ
ಕೂಡೊ ಮನವೆ ೪

## ೫೭೬

ಮನವೇನೆಂಬುದನರಿಯೋ ಮನುಜ
ಮನ ವೇನೆಂಬುದನು ಧ್ರುವ

ಮನವೇನೆಂಬುದನನುಭವಕೆ ತಂದು
ಖೂನದಲಿಡದೆ ಜ್ಞಾನದಲಿ

ನಾನಾ ಶಾಸ್ತ್ರವ ಓದಿ ನೀ ಅನುದಿನ
ಏನು ಫಳಿಸಿದ್ಯೊ ಮರುಳ ಮನುಜ ೧

ಉತ್ಪತ್ತಿ ಸ್ಥಿತಿ ಲಯ ಕರ್ತನೆಂದೆನಿಸಿ
ಪ್ರತ್ಯೇಕರವನು ತೋರುತಲಿ
ಮತ್ತೆ ಬ್ಯಾರ್‍ಯಾದ ಪರಬ್ರಹ್ಮೆಂದು ತಾ
ಚಿತ್ತ ಭ್ರಮಿಸುದು ದಾವುದೊ ಮನುಜ ೨

ಏಕೋ ವಿಷ್ಣು ವೆಂದೆನಿಸಿ ಮುಖದಲಿ
ಪೋಕ ದೈವಕೆ ಬಾಯದೆರೆಸುತಲಿ
ನಾಕುವೇದವ ಬಲ್ಲವನೆಂದೆನಿಸಿ
ವಿಕಳಿಸುತಿಹ್ಯದು ದಾವುದೊ ಮನುಜ ೩

ಉತ್ತಮೊತ್ತಮರ ಕಂಡಾಕ್ಷಣ ಹರುಷದಿ
ನಿತ್ಯಿರಬೇಕೀ ಸಹವಾಸವೆನಿಸಿ
ಮತ್ತೊಂದರಫಳಿ ಗಾಲಸ್ಯವ ತೋರಿ
ಒತ್ತಿ ಆಳುವದು ದಾವುದೊ ಮನುಜ ೪

ಪಾಪವ ಮಾಡಬಾರದು ಎಂದೆನಿಸಿ
ವ್ಯಾಪಿಸಿಗೊಡದೆ ಕಾಣದನಕ
ಉಪಾಯದಲಿ ಅಪಸ್ವಾರ್ಥವು ಇದಿರಡೆ
ಅಪಹರಿಸುವದು ದಾವುದೊ ಮನುಜ ೫

ಪ್ರಾಚೀನವೆ ತಾಂ ನಿಜವೆಂದರುಹಿಸಿ
ಆಚರಣೆಯ ಬ್ಯಾರೆ ತೋರುತಲಿ
ನೀಚ ಊಚ ಹೊಡೆದಾಡಿಸುತ
ನಾಚಿಸುತಿಹುದು ದಾವೊದೊ ಮನುಜ ೬

ಸಗುಣ ನಿರ್ಗುಣ ಬ್ಯಾರೆರಡನೆ ತೋರಿ
ಬಗೆ ಬಗೆ ಸಾಧನ ತೋರಿಸುತ
ಬಗೆದೊಂದೆವೆ ಭಕುತಿಗೆ ನೆಲೆಗೊಳಿಸಿದ ಪ್ರಗತಿ
ತೋರುವುದು ದಾವುದೊ ಮನುಜ ೭

ಧ್ಯಾನಕೆ ಕೂಡಿಸಿ ಮೋನವ ಹಿಡಿಸಿ
ಅನುದಿನ ಜಪವನು ಮಾಡಿಸುತ
ಘನವಾಗಿಹ ಅನುಭವ ಸುಖದಾಟದ
ಖೂನ ದೋರಿಸುದು ದಾವುದೊ ಮನುಜ ೮

ಮರವಿಗೆ ತಾನೆ ಅರಿವೇ ಕೊಟ್ಟು
ಅರಿವು ಮರವಿನೊಳಾಡಿಸುತ
ತಿರಿವು ಮರವಿನಂಕುರದ ಕುರ್ಹುವಿನ
ಇರಹು ತೋರಿಸುದು ದಾವುದೊ ಮನುಜ ೯

ಮನವಿನ ಮೂಲವು ತಿಳಿವದು
ಭಾನುಕೋಟಿ ಪ್ರಕಾಶನ ಕರುಣದಲಿ
ನಾನು ನಾನೆಂಬವರಿಗೆ ಇದರ
ಖೂನ ಲೇಶ ತಿಳಿಯದೊ ಮನುಜ ೧೦

ಹರಿಯೆ ಗುರುವೆಂದರುಹಿಸಿ ಆತ್ಮಲಿ
ಶರಣಹೋಗುವ ಭಾವನೆದೋರಿ
ತರಳಮಹಿಪತಿ ಗುರುದಯ ಪಡಕೊಂಡಿಂದು
ಯೋಗ್ಯನಾಗುವದಿದೊಂದೆ ಮನುಜ ೧೧

## ೫೭೭

ಮನಸಿಗೆ ಬಂತು ತಾ ಘನ ಗುರುಮೂರ್ತಿ ಶ್ರೀಪಾದ ಧ್ರುವ

ಕನಸಿಲೆ ಕಾಣದ ಕುರುಹು ಮನಸಿಗೆ ಬಂತೆನ್ನೊಳು ತಾ ಪೂರ್ಣ
ಏನೆಂದ್ಹೇಳಲಿ ಸೂಕ್ಷ್ಮ ಅನುಭವದ ಖೂನ ೧

ಮನಸಿಗೆ ಬಾರದೆ ಹೋಗಿ ಜನಸಿತು ನಾನಾ ಯೋನಿಲೆನ್ನ
ಏನೋ ಎಂತೋ ತಿಳಿಯದು ಅನಂದ ಘನ ೨

ಮನಸಿಗೆ ಬಂದ ತಾ ವಸ್ತು ಜನವನದೊಳು ತಾ ತುಂ ಬ್ಯಾದೆ
ಅನುಕೂಲವಾಯಿತು ಎನಗೆ ದೀನ ಮಹಿಪತಿಗೆ ೩

## ೫೭೮

ಮನಸಿನ ಮಾಯವೆ ಗೂಢದೋರದು ನಿಜ ಗೂಢ ಧ್ರುವ

ಮರವಿನೊಳಾಡಲು ಆಯಿತು ಮನವು
ಅರಿವಿನೊಳಾಡಲು ತೋರಿತುನ್ಮನವು
ಅರಹು ಮರುಹ ಎರಡನೆ ಮೀರಿದರೆ
ಆಯಿತು ತನ್ನೊಳು ತಾನೆ ಚಿದ್ಘನವು ೧

ಅರುಹಿತು ಸ್ಥೂಲಕೆ ಜಾಗ್ರತಿಯಾಗಿ
ಬ್ಯಾರೆದೋರಿತು ಸ್ವಪ್ನ ಸೂಕ್ಷ್ಮಕೆ ಹೋಗಿ
ಕಾರಣದಲಿ ಸಷುಪ್ತಿಯು ಆಗಿ
ತೋರಿತು ತಾನೆ ಮೂರು ಪರಿಯಾಗಿ ೨

ದೊರಕುದು ಬ್ರಹ್ಮಾಧಿಕರಿಗೆ ಖೂನ
ಮರುಳ ಮಾಡ್ಹೆಚ್ಚಿತು ವಿಷಯದ ಧ್ಯಾನ
ಕರುಣಿಸಿದರೆ ಸದ್ಗುರು ನಿಧಾನಾ
ತರಳ ಮಹಿಪತಿಗಾಯಿತುನ್ಮನ ೩

## ೫೭೯

ಮನಾ ಮನಾ ಘನಾ ಘನಾ
ಎನುತಿದೆ ಲೋಕರಿಯದೆ ಖೂನ ಧ್ರುವ

ಮನದಾವದು ಎಂದರಿಯದೆ ಖೂನ
ಘನದಾವವೆಂದರಿಯದು ಧ್ಯಾನ
ಧ್ಯಾನ ಮೋನ ಯಾತಕದೇನ
ಅನುಭವರಿಯದೆ ಮರುಳಜನ ೧

ಮೂಲದಲಿಡದೆ ಠಾವಿಲಿ ಮನ
ಜ್ಯಾಲವ್ಯಾತಕೆ ಬರೇ ಮಾತಿನ
ಕೀಲ ತಿಳಿಯದೆ ಸದ್ಗುರು ಜ್ಞಾನ
ನೆಲಿಯುಗೊಂಬುದೆ ನಿಜಸಾಧನ ೨

ಮನದಲಿ ಮನಸಿನ ತಿಳಿವದು ಬಿಟ್ಟು
ಜನವನ ತಿರುಗುದೆ ಕೆಟ್ಟು
ಮನೋನ್ಮನದೊಳಗಿದೆ ಘನಗುಟ್ಟು
ದೀನ ಮಹಿಪತಿ ಗುರು ದಯಲುಂಟು ೩

## ೫೮೦

ಮಾಡು ಮನವೆ ಸದ್ಭಕ್ತಿ
ನೋಡು ನಿನ್ನೊಳು ಸುಮುಕ್ತಿ ಧ್ರುವ

ನೀಡಿ ತನುಮನ ಧನ
ಕೂಡು ನೀ ಸದ್ಗುರುವಿನ
ನೋಡು ನಿನ್ನೊಳಗೆ ಖೂನ
ಗೂಢ ನಿಜಧನ ೧

ಪಿಡಿದು ಸದ್ಗುರು ಪಾದ
ಬಿಡದೆ ನೋಡು ನೀ ಸದಾ
ತಡೆದು ಕಾಮಕ್ರೋಧ
ಪಡಿಯೋ ಸುಬೋಧ ೨

ಕೂಡಿ ಸದ್ಗುರು ಸುಪಥ
ನೋಡು ನೀ ಸದೋದಿತ
ಮೂಢ ಮಹಿಪತಿ ಮನವೆ
ನಿನ್ನ ಸ್ವಹಿತ ೩

## ೫೮೧

ಹಸಗೀಡಾಗದಿರು ಮನವೆ
ವಿಷಯವಾಸನೆ ಕೂಡ ಧ್ರುವ

ಸತ್ಯವೆಂದೆನಬ್ಯಾಡ ದೃಶ್ಯ ಮಿಥ್ಯಾಮಾಯದ ಮೋಡ
ನಿತ್ಯಾನಿತ್ಯವಿವೇಕವಿಚಾರದ ಸತ್ಯ ಸುಪಥ ಕೂಡೊ
ನಿತ್ಯವಾಗಿಹದ ಸತ್ಯ ಸುಪಥ ಕೂಡೊ ೧

ಹೊನ್ನು ಹೆಣ್ಣಿನ ಕೂಡ ನೀ ದಣ್ಣನೆ ದಣಿಬ್ಯಾಡ
ಸುಣ್ಣ ಸಾರಿಸಿ ಮ್ಯಾಲೆ ಬಣ್ಣದೋರುವದಕ್ಕೆ ಕಣ್ಣಗೆಟ್ಟಿರಬ್ಯಾಡ
ಮಣ್ಣೆಂದರಿಯದೆ ಕಣ್ಣಗೆಟ್ಟಿರಬ್ಯಾಡ ೨

ಗುಹ್ಯಗೂಢವ ತಿಳಿಯೊ ನಾ ದೇಹವೆಂಬುದನಳಿಯೊ
ಮಹಿಪತಿ ನಿನ್ನೊಳು ಮಹಾಗುರುಕೃಪೆಯಿಂದ ಸೋಹ್ಯ
ತಿಳಿದು ನೋಡೊ
ಶ್ರೀ ಹರಿಯ ಮಹಿಮೆ ಸೋಹ್ಯ ತಿಳಿದು ನೋಡೊ ೩

## ೫೮೨

ಹಿಂದಕೆ ತಿರುಗಿ ನೋಡು ಮನವೆ ಹೊಂದಿಕಿ ಹೊಲಬು ನಿನ್ನ
ಅಂಧಕನಾಗಿರದೆ ನೀ ಪೂರ್ಣ ಹೊಂದೋ
ಸದ್ಗುರುವಿನ ಶ್ರೀಚರಣ ಧ್ರುವ

ಮುಂದೆ ಮುಂದಕೆ ನೋಡುತ ಬಂದು ಹಿಂದಿನ
ಹೊಲಬು ಮರೆದ್ಯೊ
ಎಂದೆಂದಿಗೆ ಆಗಲದ ಸದ್ವಸ್ತು ಸಂಧಿಸಿಹುದು ಜರೆದ್ಯೊ
ಕುಂದಿ ಕುಂದಿ ಕಳೆವ ವಿಷಯಕೆ ಸಂಧಿಸಿ ಬಾಯ್ದೆರದ್ಯೊ
ಬಂದು ಬಂದು ಭವಪಾಶಕೆ ಸಿಲ್ಕಿ ಬೆಂದು ಒಡಲನೆ ಹೊರೆದ್ಯೊ ೧

ತಿರುಗಿ ನೋಡಲು ತನ್ನೊಳಗೆ ತಾ ತೋರುತ ಅದೆ ಕೌತುಕ
ಏರಿ ನೋಡಲು ಆರುಚಕ್ರ ಸುರಿಯುತಿದೆ ಸವಿಸುಖ
ಪರಿಪರಿ ಭಾಸುತಿಯಹುದು ಪರಬ್ರಹ್ಮದ ಗತಿ ಹರುಷಾನೇಕ
ಅರಿತು ಕೂಡುವ ಬೆರೆದು ಪರಾತ್ಪರದೋರುತಿಹ್ಯ
ಸದ್ಗುರುಮುಖ ೨

ಸೆರಗವಿಡಿದು ಸಾರುವ ಶ್ರುತಿಯ ತಿರುಗಿನೋಡು ನಿನ್ನೊಳಗೆ
ಮರಳಿ ಹುಟ್ಟಿ ಬಾರನೀ ಜನ್ಮಕೆ ಸ್ಥಿರಹೊಂದುವಿ ಗತಿಯೊಳಗೆ
ತರಳ ಮಹಿಪತಿ ಮನವೆ ನಿನಗಿದು ಗುರುಕರುಣದೆ
ಘನ ಬೆಳಗೆ
ಶರಣ ಜನರಾನಂದದ ಗತಿಯು ತೋರುತಿಹುದು
ಘನ ತನ್ನೊಳಗೆ ೩

## ೫೮೩

ಹತ್ತಿಲಿಹ ವಸ್ತುನೋಡೊ ಮನವೆ
ನಿತ್ಯ ನಿಜನಿರ್ಗುಣವ ಕೂಡೊ ಮನವೆ ಧ್ರುವ

ಅತ್ತಲಿತ್ತಲಾಗದಿರು ಮನವೆ
ಚಿತ್ತ ಚಂಚಲ ಮಾಡದಿರೆನ್ನ ಮನವೆ
ಉತ್ತುಮ ಸುಪಥ ನೋಡು ಮನವೆ
ನೆತ್ತಿಯೊಳಿಹ ಸುವಸ್ತು ಕೂಡೊ ಮನವೆ ೧

ಹೋಕಹೋಗದಂತೆ ಎನ್ನ ಮನವೆ
ಏಕರಸವಾಗಿ ಕೂಡೊ ಎನ್ನ ಮನವೆ
ನಾಲ್ಕು ಶೂನ್ಯವ ಮೆಟ್ಟಿ ನೋಡು ಮನವೆ
ಜೋಕೆಯಿಂದ ಜ್ಯೋತಿರ್ಮಯ ಕೂಡೊ ಮನವೆ ೨

ಧನ್ಯವಿದು ರಾಜಯೋಗಮನವೆ
ಭಿನ್ನವಿಲ್ಲದೆ ಬೆರೆದು ಕೂಡೊ ಮನವೆ
ಚೆನ್ನಾಗಿ ಚಿನ್ಮಯ ನೋಡು ಮನವೆ
ಅನ್ಯಪಥವಿನ್ಯಾತಕ ನೋಡು ಮನವೆ ೩

ಗರ್ವಗುಣ ಹಿಡಿಯದಿರು ಮನವೆ
ನಿರ್ವಿಕಲ್ಪನ ತಿಳಿದು ನೋಡು ಮನವೆ
ಪೂರ್ವಪುಣ್ಯಹಾದಿ ಇದು ಮನವೆ
ಸರ್ವರೊಳು ವಸ್ತುಮಯ ಒಂದೆ ಮನವೆ ೪

ದೃಷ್ಟಿಸಿ ಆತ್ಮನ ನೋಡು ಮನವೆ
ಪುಷ್ಟವಾಗಿ ಘನದೋರುವದು ಮನವೆ
ಭ್ರಷ್ಟವಾಗಿ ಬಾಳಬ್ಯಾಡ ಮನವೆ
ನಿಷ್ಠನಾಗಿ ನಿಜನೆಲೆಯಗೊಳ್ಳ ಮನವೆ ೫

ಏರಿ ಆರುಚಕ್ರ ನೋಡು ಮನವೆ
ಪರಮಾನಂದ ಸುಪಥ ಕೂಡೊ ಮನವೆ
ಆರು ಅರಿಯದ ಹಾದಿ ಮನವೆ
ತೋರಿಕೊಡುವ ಸದ್ಗುರು ಎನ್ನ ಮನವೆ ೬

ಹರಿಭಕ್ತಿಯೊಳಗಿರು ಮನವೆ
ಸಿರಿ ಸದ್ಗತಿ ಸುಖವ ಕೂಡೊ ಮನವೆ
ಗುರುವಾಕ್ಯ ನಂಬಿ ನಡೆ ಮನವೆ
ಪರಲೋಕಕ್ಕೆ ಸೋಪಾನವಿದು ಮನವೆ ೭

ಪರದ್ರವ್ಯಗಲ್ಪದಿರು ಮನವೆ
ಪರಸತಿಯ ನೋಡದಿರೆನ್ನ ಮನವೆ
ಪರರ ನಿಂದ್ಯ ಮಾಡದಿರು ಮನವೆ
ದಾರಿ ಹೋಗದಿರು ದುಷ್ಟರ ನೀ ಮನವೆ ೮

ಸಜ್ಜನರ ಸಂಗ ಮಾಡೊ ಮನವೆ
ಹೆಜ್ಜೆವಿಡಿದು ಪರಲೋಕ ಕೂಡೊ ಮನವೆ
ಭೆಜ್ಜರಿಕೆ ಹಿಡಿಯೊ ಎನ್ನ ಮನವೆ
ದುರ್ಜನರ ಸಂಗ ಮಾಡಬ್ಯಾಡೊ ಮನವೆ ೯

ಕಂಗಳ ತೆರೆದು ನೋಡು ಮನವೆ
ಮಂಗಳಾತ್ಮನ ಶ್ರೀಪಾದ ಕೂಡೊ ಮನವೆ
ಹಿಂಗದಂತೆ ಕೂಡೊ ಬ್ಯಾಗೆ ಮನವೆ
ಗಂಗೆಯೊಳು ಜಲಬೆರೆದಂತೆ ಮನವೆ ೧೦

ಭೇದ ಬುದ್ಧಿಯ ಮಾಡಬ್ಯಾಡ ಮನವೆ
ಸಾಧುಸಂತರ ಸುಬೋಧ ಕೇಳು ಮನವೆ
ಭೇದಿಸಿ ತಿಳಿದುನೋಡು ಮನವೆ
ಸದಮಲ ಬ್ರಹ್ಮ ಸೂಸುತಿದೆ ಮನವೆ ೧೧

ಯುಕ್ತಿ ನಿನಗಿದು ನೋಡು ಮನವೆ
ಭಕ್ತವತ್ಸಲ ಸ್ಮರಿಸು ಮನವೆ
ಮುಕ್ತಿಯಿಂದಧಿಕಸುಖ ಮನವೆ
ಭಕ್ತಿರಸದೊಳು ಮುಳಗ್ಯಾಡು ಮನವೆ ೧೨

ಲೇಸು ಲೇಸು ಮಹಿಪತಿ ಸು ಮನವೆ
ದಾಸನಾಗಿರುವ ವಾಸುದೇವನ ಮನವೆ
ಭಾಸಿ ಪಾಲಿಪನ ಕೂಡೊ ಎನ್ನ ಮನವೆ
ಭಾಸ್ಕರ ಮೂರ್ತಿಯ ನೋಡು ಮನವೆ ೧೩

## ೫೮೪

ಹೊಂದು ಮನವೆ ಹೊಂದೆನ್ನ ಮನವೆ
ಒಂದು ಪಥ ಬ್ಯಾಗ ಸೇರೆನ್ನ ಮನವೆ ಧ್ರುವ

ಮೂರೊಂದು ಪಾಲಾಗದಿರೆನ್ನ ಮನವೆ
ಮೂರೆರಡು ಬಟ್ಟ್ಯಾಗದಿರು ಮನವೆ ೧

ಮೂರು ಆರು ಪರಿ ಆಗದಿರೆನ್ನ ಮನವೆ
ಮೂರೆರಡರಲಿ ಅಡರದಿರು ಮನವೆ ೨

ಮೂರು ಸೆರಗ ಹಿಡಿದರೆನ್ನ ಮನವೆ
ಮೂರರೊಳಗೆ ತೊಳಲದಿರು ಮನವೆ ೩

ಮೂರು ಬಟ್ಟೆಗಳನ್ನು ಮರಿಯೆನ್ನ ಮನವೆ
ಮಹಿಪತಿ ಗುರುಪಾದ ಮೊರಿ ಎನ್ನ ಮನವ ೪

## ಯೋಗದರ್ಶನ

### ೫೮೫

ಎಂತುಗೂಡುವದೊ ನಿಜ ಹರಿಯೆ ಧ್ರುವ

ನಿರ್ದ್ವಂದ್ವದಲಿದ್ದ ಒಂದೆ ವಸ್ತುವೆ ನೀನು
ದ್ವಂದ್ವಾಭೇದದ ಸಂದೇಹಿ ನಾನು
ಅಂದಿಗಿಂದಿಗೆ ಪೂರ್ಣ ಎಂದೆಂದಿಗೆ ನೀನು
ಹೊಂದಲರಿಯದಾ ತಿಮಿರಾಂಧ ನಾನು ಹರಿ ೧

ನಿಃಪ್ರಪಂಚದ ನಿರ್ಮಳ ನಿರ್ಗುಣನು ನೀನು
ಪ್ರಾಪಂಚಿಕ ಪರಮ ನಾನು
ಕೃಪೆಯುಳ್ಳ ಕರುಣಾಕಾರ ಪರಿಪೂರ್ಣ ನೀನು
ಕಪಟ ಕುಟಿಲಲಿಹ ಪ್ರಾಣಿ ನಾನು ಹರಿ ೨

ಮಹಿಗೆ ಪತಿಯಾದ ಸ್ವಾಮಿ ಶ್ರೀಪತಿ ನೀನು
ಸೋಹ್ಯ ತಿಳಿಯದಾ ಮಂದಮತಿ ನಾನು
ಸಾಹ್ಯ ಮಾಡುವ ಸಹಕಾರ ಸದ್ಗತಿ ನೀನು
ಮಹಾಮಹಿಮೆಯುಳ್ಳ ಮೂರುತಿ ನೀನು ೩

### ೫೮೬

ಎಂದೆಂದು ಎನಗೆ ನೀನೆ ಅಖಿಳದೊಳು
ಎಂದೆಂದು ಎನಗೆ ನೀನೆ
ಅಂದಿಗಿಂದಿಗೆ ಎನ್ನ ತಂದೆ ತಾಯಿಯು ನೀನೆ
ಬಂಧು ಬಳಗವು ನೀಯೆನಗೆ ಹರಿಯೆ ಧ್ರುವ

ಸುಖಸೌಖ್ಯದಲಿ ಸದಾನಂದ ಘನ ಬೀರುತಿಹ್ಯ
ಭಗುತ ಜನರಿಗಹುದು ನೀ ಪ್ರೀಯ
ಸಕಲದೇವಾದಿಗಳ ಕೈಯಲೊಂದಿಸಿಕೊಂಬ
ಮಕುಟ ಮಣಿಯಹುದೊ ನೀ ಎನ್ನಯ್ಯ
ಲೋಕಾಧಿಲೋಕಪಾಲನೆಂದು ಶ್ರುತಿಸ್ಮೃತಿ
ಪ್ರಕಟಸಾರುತವೆ ಸುಕೀರ್ತಿಯ ಅಖಿಳ ಭುವನದಲೆನ್ನ
ಸಾಕಿ ಸಲಹುವ ಸ್ವಾಮಿ ೧

ಏಕೋದೇವನೆ ನೀನದ್ವಿತೀಯ
ಶ್ರೇಯಧೇನುವಾಗಿ ಸಾರಸಗರವುತಿಹ್ಯ ಸುಖ
ದಾಯಕಹುದಯ್ಯ ನೀ ಸಾಕ್ಷಾತ
ದಯಕರುಣದಿಂದಭಯಕರ ನಿತ್ಯಸಂಗಪೂರ್ಣ
ತೋಯಜಾಕ್ಷ ನೀ ಪೂರ್ಣಪರಮ ಭಕ್ತರ ಪ್ರಾಣ
ನಾಯಕನೆ ನೀನೆ ಪ್ರಖ್ಯಾತ ಕ್ಷಯರಹಿತನೆಂದು
ಜಯವೆನಿಸಿಕೊಳುತಿಹ್ಯ
ದಯಭರಿತನಹುದುಯ್ಯ ಸದೋದಿತ ೨

ನೀನೆ ಗತಿಯೆಂದು ಧರೆಯೊಳು ಕೊಂಡಾಡುವ
ನೆನಹುತಿಹ್ಯ ನಹುದುಯ್ಯ ಬಾಲಕನು ನಾ ನಿನ್ನ
ಘನದೊಲವಿನಿಂದ ಪಾವನಗೈಸುತಲಿಹ್ಯ
ದೀನ ದಯಾಳು ನೀನೆ ಎನ್ನ
ಅನುದಿನದಲಾಧಾರಿ ಮುನಿಜನರ ಸಹಕಾರಿ
ನೀನಹುದಯ್ಯ ಜಗಜ್ಜೀವನ
ಮನೋಹರನ ಮಾಡುತಿಹ್ಯ ದಾಸ ಮಹಿಪತಿಸ್ವಾಮಿ
ಭಾನುಕೋಟಿಯು ನೀನು ಪ್ರಸನ್ನ ೩

## ೫೮೭

ಒಡಿಯನಹುದೊ ಎನ್ನ ನೀ ಎನ್ನ
ಪಿಡಿದಿಹ ಕೈಯಲ್ಲಿ ನಿನ್ನ ಧ್ರುವ

ನೋಡದವಗುಣನ್ನ ಅವಗುಣನ್ನ
ಮಾಡುವೆ ನೀ ಪಾವನ
ನೀಡುವೆ ಪಡೆದೆನ್ನ ಪಡೆದೆನ್ನ
ಕೂಡು ದಯದಲಿ ಸಂಪನ್ನ ೧

ಭಿನ್ನವಿಲ್ಲದೆ ನೀಯೆನ್ನ ನೀಯೆನ್ನ
ಚನ್ನಾಗ್ಯಾದೆ ಪ್ರಸನ್ನ
ಉನ್ನತಗುಣ ನಿನ್ನ ನಿನ್ನ
ಚಿನ್ಮಯದ ಚಂದ್ರನ್ನ ೨

ಬಿರುದಿನ ಪ್ರಖ್ಯಾತ ಪ್ರಖ್ಯಾತ
ಬಿರುದು ಪ್ರಾಣನಾಥ
ತರಳ ಮಹಿಪತಿದಾತ ಸುದಾತ
ಗುರುಶಿರೋಮಣಿ ಸಾಕ್ಷಾತ ೩

## ೫೮೮

ಒಡಿಯನಹುದೋ ನೀ ನಮ್ಮ ಪಿಡಿದಿಹೆ ಪಾದ ನಾ ನಿಮ್ಮ ಧ್ರುವ

ಮಹಾಮಹಿಮೆ ನೀ ದಾನತಹುದೋ ಶ್ರೀ ಅವಧೂತ
ಗುಹ್ಯಗುಪಿತ ಶ್ರೀನಾಥ ಸುಹೃದಯದಲಿ ಸಾಕ್ಷಾತ ೧

ಅನಾಥರ ಸಹಕಾರ ಮುನಿಜನರ ಮಂದಾರ
ಘನಗುರು ಜ್ಞಾನಾಸಾಗರ ದೀನಜನರ ಉದ್ಧಾರ ೨

ಮಹಾಗುರು ನಿಜನಿಧಾನ ಬಾಹ್ಯಾಂತ್ರದಲಿ ಪರಿಪೂರ್ಣ
ಮಹಿಪತಿ ಜೀವನಪ್ರಾಣ ಇಹ್ಯಪರ ನೀ ಭೂಷಣ ೩

## ೫೮೯

ಒಡಿಯನೆಂದು ನಿಮ್ಮ ವಿಡದಿರೆ ಪಾದವ
ಬಡತನ ವ್ಯಾತಕೆ ನಮಗೆ
ಕಡೆಗಣ್ಣ ನೋಡಿದಿದ್ದರೆ ನಿಮ್ಮ ಭೂಷಣ
ಬಿಡುವವ ನಾನಲ್ಲ ನಿಮಗೆ ೧

ಪಿಡಿದು ಪಾದವ ನಿಮ್ಮ ಬಡವನೆಂದೆನಿಸಲು
ಜಡನುಡಿ ನಿಮಗೆ ನಿಮಗೆ ಭೂಷಣವೆ
ಬಿಡುಬಿಡು ಭಕ್ತವತ್ಸಲನೆಂಬ ಬಿರುದವ
ಒಡಲ ಹೊರೆವ ದೊಂದಿರದವಗೆ ೨

ಬಡವನಾಧಾರವೆಂದು ಕೊಂಡಾಡುತಿರಲಿನ್ನು
ಬಡಿವಾರ ವ್ಯಾತಕ್ಕೆ ನಿಮಗೆ
ನುಡಿ ಮಾತಿನಂತಲ್ಲ ಪೊಡಿವಿಯೊಳಗಿದು
ಬಿಡುವಾಂಗಿಲ್ಲ ನಮ್ಮ ನಿಮಗೆ ೩

ಪಿಡಿದ ಪಾದವ ನಿಮ್ಮ ಬಿಡೆನೆಂಬ ದೃಢವಿದು
ಒಡೆಯ ಕೇಳಿನ್ನಿ ಮಾತು
ಬಿಡಿಸಿಕೊಂಡರೆ ನಿಮ್ಮ ಬಿಡುವರಾರಿನ್ನು
ನೋಡು ತಿಳಿದು ಗುರುನಾಥ ೪

ಅಡಿಗಳ ಕುಡಿಯೊಳುವಿಡಿದು ನಾ ನಿಮ್ಮನು
ಒಡುವೆ ಸದ್ಗತಿ ಹರುಷವನು
ಮೂಢಮಹಿಪತಿಗಿನ್ನು ಬ್ಯಾರೆ ಗತಿಯ ಕಾಣೆ
ಒಡೆಯ ನಿಮ್ಮಪಾದಪದ್ಮದಾಣೆ ೫

## ೫೯೦

ಒಡಿಯ ನೀನಹುದೊ ಎನ್ನ ಬಡವನಾಧಾರಿ ನೀನು ಧ್ರುವ

ಪೊಡವಿಯೊಳಗೆ ಎನ್ನ ಬಿಣದೆ ಸಲಹುತಿಹ್ಯ
ಅಡಿಗಡಿಗೆ ತಂದು ನೀ ಪಡಿಯ ನಡೆಸುವ ಸ್ವಾಮಿ ೧

ಪಿಡಿದು ಎನ್ನ ನೀ ಕೈಯ ಕಡೆಗಾಣಿಸುವಿ ಪೂರ್ಣ
ಬಿಡಿಸಿ ಧಾವತಿಯಿಂದ ಕೊಡುವಿ ತಂದು ನಿಧಾನ ೨

ಕೊಂಡಾಡಲಳವೆ ನಿನ್ನ ಮಂಡಲದೊಳು ಕೀರ್ತಿ
ಪಿಂಡ ಬ್ರಹ್ಮಾಂಡ ಪರಿಪೂರ್ಣವಾಗಿಹ ದೇಹ ೩

ಕೊಳದೆ ಸೇವೆಯ ನಿನ್ನ ಅಳೆದು ನಡೆಸುವ ಪಡೆಯ
ಪಾಲಕನಹುದೊ ಎನ್ನ ಮೂಲೋಕದೊಡಿಯನೆ ೪

ನಿತ್ಯನಿಜವಾಗ್ಯಾಗ ಹೊತ್ತು ನಡೆಸುವ ಪಡೆಯ
ಭೃತ್ಯರ ನಿಜ ಭೃತ್ಯ ನಿಜ ದಾಸಮಹಿಪತಿಗಿನ್ನು ೫

## ೫೯೧

ಕಾಯೊ ಕಾಯೊ ಕಾಯೊ ಕಾಯೊ ಕೃಪಾನಿಧಿ
ಕಾಯೊ ಕೃಪಾಳು ಸದ್ಗುರು ದಯ ನೀ ಪಾಲಿಸಿ
ಸೋಹ್ಯಸೊನ್ನೆ ಸೂತ್ರಗುಹ್ಯ ಗೂಢದೋರಿ

ಸಾಹ್ಯಮಾಡೊ ಸ್ವಾಮಿ ಸಾಕ್ಷಾತ್ಕಾರ ನೀ ದೋರಿಸಿ
ನ್ಯಾಯದಲಿ ಮಿಥ್ಯಾಮಾಯ ಮೊನೆಮುರಿಸಿ
ತೋಯಜಾಕ್ಷ ನಿಮ್ಮ ಶ್ರಯ ಸುಖ ಬೀರಿ ಭವ
ಭಯ ಹರಿಸೊ ಗುರು ಕರುಣಿಸೊ ೧

ನಾನಾರು ಎಂದು ಸಾಖೂನ ತಿಳಿಯದೆ
ನಾನಾ ಯೋನಿಮುಖ ಜನಿಸಿ ಬಂದೆನಯ್ಯ ಜನುಮ
ಜ್ಞಾನಗಮ್ಯವಾದ ಸ್ಥಾನದೋರಿ ನಿಜ
ಧ್ಯಾನ ಮೌನದನುಭವ ಸುಖ ನೀಡೊ ನಿಮ್ಮ
ನ್ಯೂನ ಪೂರ್ಣ ಎನ್ನ ನೀ ನೋಡದೆ ಸ್ವಾಮಿ
ಸ್ವಾನುಭವದ ಸುಜ್ಞಾನ ದೀಪಲಿಡೊ ನಮ್ಮ
ಮನೋನ್ಮನವಾಗಿ ಘನ ಕೈಗೂಡುವಾ
ಸನ್ಮತ ನೋಡಿ ಸುವರ್ಮ ೨

ನೋಡದೆ ಗುಣದೋಷ ಮಾಡಿ ಉಪದೇಶ
ದೃಢಭಾವದ ಸುಪಥ ಒಡನೆ ಗೂಡಿಸೊ
ನೋಡಿ ದೃಷ್ಟಿಲೆನ್ನ ಒಡೆಯ ಸದ್ಗುರು ಪೂರ್ಣ
ಓಡಿಹೋಗುವಂತೆ ಭಕ್ತಿ ಜ್ಞಾನ ವೈರಾಗ್ಯವಿಡಿಸೊ
ನೀಡಿ ಅಭಯಕರುಣಕವಚವ ತೊಡಿಸೊ
ಪಿಡಿದು ಎನ್ನ ಕೈಯಾ ಮೂಢ ಮಹಿಪತಿಯ
ಬಿಡದೆ ಕಡೆಗಾಣಿಸೊ ೩

## ೫೯೨

ಕಂಡೆವಯ್ಯ ಗುರುನಿಮ್ಮ ಶ್ರೀಪಾದ
ಸಂದಿಸಿತು ಎನ್ನ ಭೇದಾಭೇದ
ಮಂಡಲದೊಳಾಯಿತಯ್ಯ ಸುಬೋಧ
ಕೊಂಡಾಡುವೆ ಕೀರ್ತಿ ಅಖಂಡವಾದ ೧

ಸ್ಮರಿಸುವೆ ನಿಮ್ಮ ಕ್ಷಣ ಕ್ಷಣ
ಸ್ಮರಿಸುವೆ ನಿಮ್ಮ ಶ್ರೀಚರಣ
ಸ್ಮರಿಸುವೆ ನಿಮ್ಮ ಸಗುಣ ನಿರ್ಗುಣ
ಸ್ಮರಿಸುವೆ ನಿಮ್ಮನಾ ಅನುದಿನ ೨

ಸ್ಮರಿಸದೆ ನಿಮ್ಮ ಸ್ವರೂಪ ನಿರ್ವಾಣ
ಅರಘಳಿಗಿರಲಾರದೆನ್ನ ಪ್ರಾಣ
ಅರಿಯೆ ನಾ ಅನ್ಯ ಪಥ ನಿಮ್ಮ ವಿನಾ
ಮೊರೆ ಹೊಕ್ಕಿದೆ ನಾ ಪರಿಪೂರ್ಣ ೩

ಆವಾವ ಪರಿಯಲಿನಿಮ್ಮ ಕೀರ್ತಿ
ದಿವಾರಾತ್ರೆಯಲಿ ಕೇಳುವ ಸುವಾರ್ತಿ
ಭಾವಿಸುವೆ ನಿಮ್ಮ ನಿಜಾನಂದ ಮೂರ್ತಿ
ಜೀವನ ಮಾಡುವೆ ನಾ ಮಂಗಳಾರ್ತಿ ೪

ಬಾಹ್ಯಾಂತ್ರ ನಿಮ್ಮ ಧ್ಯಾನಿಸುವೆ ನಿತ್ಯಾ
ಮಹಾಗುರು ನಿಮ್ಮ ಕೃಪೆವಿದು ಸತ್ಯ
ಗುಹ್ಯ ಮಹಾವಾಕ್ಯವಾಯಿತು ಪಥ್ಯ
ಮಹಿಪತಿ ಆದ ನೋಡಿ ತಾ ಕೃತಕೃತ್ಯ ೫

## ೫೯೩

ಯುಕ್ತಿಯಿಂದ ಭಕ್ತಿ ಮಾಡಲಿಕ್ಕೆ ಶಕ್ತನಲ್ಲ ನಾ
ಮುಕ್ತಿಯೋಗ್ಯ ಮಾಡೊ ಭಾವಭೋಕ್ತ ಕೃಪಾನಿಧೆ ಧ್ರುವ

ಧ್ಯಾನ ಮೌನ ಸ್ನಾನ ಸಂಧ್ಯಾಖೂನ ಗುರುತು ಅರಿಯೆ ನಾ
ನ್ಯೂನ ಪೂರ್ಣ ನೋಡದೆನ್ನ ರಕ್ಷಿಸೋ ದಯಾನಿಧೆ ೧

ಹೀನ ದೀನ ಜ್ಞಾನಶೂನ್ಯ ದಾನ ಧರ್ಮ ಅರಿಯೆ ನಾ
ನೀನೆ ಕಾಯಬೇಕು ಎನ್ನ ಕರುಣಾ ಕೃಪಾನಿಧೆ ೨

ದುರುಳ ದುರ್ವಾಸನೆಯ ದುರಾಚಾರಿ ದುರಾತ್ಮ ನಾ
ತರಣೋಪಾಯ ದೋರಿಸೆನ್ನ ಹೊರಿಯೊ ದಯಾನಿಧೆ ೩

ಅರುಹು ಕುರುಹು ನರಿಯ ದೀಹ್ಯ ಮರುಳಮಂಕ ತರಳನಾ
ಕರವ ಪಿಡಿಯ ಧರೆಯೊಳಿನ್ನು ತಾರಿಸೊ ದಯಾನಿಧೆ ೪

ಆಶಾಪಾಶದೊಳು ವಾಸವಾದ ದೋಷ ರಾಶಿ ನಾ
ಭಾಸಿ ಪಾಲಿಸು ಪುಣ್ಯ ಪ್ರಕಾಶಿಸೊ ದಯಾನಿಧೆ ೫

ಏಸು ಜನ್ಮ ಮೋಸಹೋಗಿ ಘಾಸಿಯಾದ ಜೀವ ನಾ
ದಾಸರೊಡನೆ ಕೂಡಿಸೊ ಭಾಸ್ಕರ ದಯಾನಿಧೆ ೬

## ೫೯೪

ಬಾರಯ್ಯ ಗುರು ಸ್ವಾಮಿ ಶ್ರೀಸದ್ಗುರು ಎನ್ನ ಮನೋಮಂದಿರಕೆ
ಕರುಣಾನಂದದ ಸುಖ ಬೀರುತ ಬಾರೈ ಆತ್ಮಾನುಭವಕೆ ಧ್ರುವ

ಕಣ್ಣು ಹಾರುತಿದೆ ಬಲದೆನ್ನ ಖೂನದೋರವ್ಹಾಂಗಿಂದು
ಚೆನ್ನಾಗ್ಹೊಳಿಯುತಿ ಸುಚಿಹ್ನ ನೀನೊಲಿಯವ್ಹಾಂಗೆ ಬಂದು
ಎನ್ನೋಳೀವ್ಹಾಂಗ ಸನಾತನ ಪಾಲಿಸಿದೆನಗೊಂದು
ಧನ್ಯಗೈಸುವ ದಯಾಳು ನೀನಹುದೊ ಕೃಪಾಸಿಂಧು ೧

ಏನೊಂದರಿಯೆ ಒಂದು ಸಾಧನ ಧ್ಯಾನಮೌನ ಹ್ಯಾಗೆಂದು
ಖೂನಬಲ್ಲೆನೊ ನಿಮ್ಮ ಬಿರುದಿನ ದೀನನಾಥ ನೀ ಎಂದು
ನ್ಯೂನಾರಿಸದೆನ್ನೊಳಗಿನ ನೀನೆ ಅನಾಥಬಂಧು
ಎನಗುಳ್ಳ ಸ್ವಾಮಿ ಸದೋದಿತ ನೀನಹುದೊ ಎಂದೆಂದು ೨

ತಾಯಿ ಶಿಶುಸ್ತನಪಾನಕೆ ಬಾಯಿಯೊಳಗಿಡುವ್ಹಾಂಗ
ಸಾಯಾಸವಿಲ್ಲದೀಪರಿ ದಯಮಾಡುವದೆನಗೆ
ಶ್ರೇಯಸುಖದಾಯಕೊಬ್ಬನು ನೀನೆ ಭಾನುಕೋಟಿ ಎನಗೆ
ತಾಯಿತಂದೆ ಎನಗೆ ಅನುದಿನ ದೀನಮಹಿಪತಿಗೆ ೩

## ೫೯೫

ಬಾರಯ್ಯ ಬಾರೊ ಗುರುರಾಯ ತೋರಯ್ಯ ನಿಜಪ್ರಭೆಯ
ಬೀರಿಸಯ್ಯ ನಿಮ್ಮದಯಕರುಣಿಸಯ್ಯಾನಂದೋದಯ ಧ್ರುವ

ಕಣ್ಣು ಒರೆಯುತಿದೆ ಇಂದು ಪುಣ್ಯಚರಣ ನೋಡೇನೆಂದು
ಮನ್ನಿಸಯ್ಯ ಕೃಪಾಸಿಂಧು ಧನ್ಯಗೈಸಯ್ಯ ನೀ ಬಂದು ೧

ಮನವು ನೆನವುತದೆ ನಿಮ್ಮ ಅನುವಾಗಿ ನೋಡೇನೊಮ್ಮೆ
ಕನಗರಿಸೇಳುತ್ತದೆ ನಿಮ್ಮ ಅನುಕೂಲಾಗಾನಂದೋಬ್ರಹ್ಮ ೨

ನೆವನಗೊಂಡಿದೆನ್ನಪ್ರಾಣ ಹವಣಿಸಿ ನೋಡಲು ಖೂನ
ಭಾವಿಸುತಿದೆ ಜೀವನ ದೈವಾಗಿಬಾರಯ್ಯ ಪೂರ್ಣ ೩

ಕಂದ ನಿಮ್ಮ ಮಹಿಪತೆಂದು ಬಂದು ಕೂಡೊ ಹೃದಯಲಿಂದು
ತಂದೆ ತಾಯಿ ನೀನೆ ಬಂಧು ಎಂದೆಂದಗಲದಿರೊ ಬಂದು ೪

## ೫೯೬

ಬಾರೋ ಬಾರೋ ಬಾರಯ್ಯ ಬಾರೊ ಸದ್ಗುರುಸ್ವಾಮಿ
ಬಾರಯ್ಯ ಬಾರೊ ಮದ್ಗುರು ಸ್ವಾಮಿ ಬಾರಯ್ಯ ಬಾರೊ ಧ್ರುವ

ಸ್ವರೂಪಸುಖ ನಿಜವನ್ನು ತೋರೊ
ಹರುಷಾನಂದದನುಭವ ಬೀರೊ
ಗುರುತವಾಗೈನ್ನೊಳು ನಿತ್ಯವಿರೊ
ತರಣೋಪಾಯದ ನಿಜಬೋಧ ನೀ ಸಾರೊ ೧

ಕಣ್ಣುಕೆಂಗೆಂಡುತಾವೆ ಕಾಣದೆ ನಿಮ್ಮ
ಪುಣ್ಯಚರಣ ತೋರೊ ಘನ ಪರಬ್ರಹ್ಮ
ಚಿಣ್ಣಕಿಂಕರ ಅತಿದೀನ ನಾ ನಿಮ್ಮ
ಧನ್ಯ ಧನ್ಯಗೈಸುವದೆನ್ನ ಜನುಮ ೨

ಚಾಲ್ವರುತಾವೆ ಮನೋರಥಗಳು
ಆಲೇಶ್ಯ ಮಾಡದಿರು ನೀ ಕೃಪಾಳು
ಮೇರೆದಪ್ಪಿ ಹೋಗುತಿದೆ ದಿನಗಳು
ಬಲು ಭಾಗ್ಯೊದಗಿಬಾಹುದು ನೀ ದಯಾಳು ೩

ಹಾದಿ ನೋಡುತಿದೆ ಹೃದಯ ಕಮಲ
ಸಾಧಿಸಿಬಾಹುದು ಮುನಿಜನ ಪಾಲ
ಸಾಧುಹೃದಯ ನೀನಹುದೊ ಸಿರಿಲೋಲ
ಛೇದಿಸೊ ನೀ ಬಂದು ಭವಭಯಮೂಲ ೪

ಬಾರದಿದ್ದರೆ ಪ್ರಾಣ ನಿಲ್ಲದೊ ಎನ್ನ
ಕರುಣಿಸಿಬಾಹುದು ಜಗನ್ಮೋಹನ
ತರಳ ಮಹಿಪತಿಗೆ ನೀ ಜೀವಜೀವನ
ಕರೆದು ಕರುಣ ಮಳೆಗೈಸು ಪಾವನ ೫

## ೫೯೭

ಅನುಭವವಿದೇ ನೋಡಿ ಆನಂದೋ ಬ್ರಹ್ಮ
ಏನೆಂದ್ಹೇಳಲಿನ್ನಾಗುವ ಸಂಭ್ರಮ ಧ್ರುವ

ಸುಖ ನೋಡಿ ನಮ್ಮ ಸ್ವಾನುಭವದ
ಸಖರಿಂದ ಮೀರಿ ಬಲು ಸುಸ್ವಾದ
ಅಖರಿಂದ ಕೇಳಿ ನಿಜ ಬೋಧಾ
ಶುಕಮುನಿ ಸೇವಿಸುದಾ ೧

ಬೆರೆದು ನೋಡಿ ಆರು ಚಕ್ರವೇರಿ
ಸುರಿಯುತಿದೆ ಸುಖ ಸಂತ್ರಾಧಾರಿ
ಭೋರ್ಗರೆಯುತಿದೆ ಅನಂತ ಪರಿ–
ದೋರಿ ಕೊಡುತಾನೆ ಶ್ರೀಹರಿ ೨

ಸುಗ್ಗಿ ಇದೇ ನೋಡಿ ಸುಜ್ಞಾನಿಗಳು
ಲಗ್ಗೆ ಮಾಡಿಕೊಳ್ಳಿ ಅದೆ ಬಲು ಬಹಳ
ಬೊಗ್ಗಿ ಉಣಬೇಕು ಇದು ಸರ್ವಕಾಲ
ಹಿಗ್ಗಿಕೊಳ್ಳೊ ಮಹಿಪತಿ ನೀ ತರಳ ೩

## ೫೯೮

ಅಭ್ಯಾಸವಮಾಡಿ ಅಭ್ಯಂತ್ರದೊಳಗಿಹುದು ಧ್ರುವ

ಕಣ್ಣು ಕಾಣುವದ್ಹಚ್ಚಿ ಚೆನ್ನಾಗಿ ಚಿತ್ಸ್ವರೂಪವ
ಭಿನ್ನವಿಲ್ಲದೆ ಭಾಸುವದು ಪುಣ್ಯಪ್ರಭೆಯು ೧

ಕಿವಿಯು ಕೇಳುವದ್ಹಚ್ಚಿ ಸವಿಸವಿ ಸಾರಾಯದ ಶ್ರುತಿ
ಆವಾಗ ನಿಮ್ಮೊಳಾಲಿಸಿ ಪವಿತ್ರ ಪ್ರಣವ ೨

ಘ್ರಾಣ ಗ್ರಹಿಸುವದ್ಹಚ್ಚಿ ದೇಹದೊಳಾವಾಗ ಪೂರ್ಣ
ಸೋಹ್ಯ ಸೂತ್ರವಿದು ಸೋಹ್ಯವೆಂಬುದಾ ೩

ಜೀವಕೆ ಜೀವ್ಹಾಳಚ್ಚಿ ಸುವಿದ್ಯಸೇವೆ ಸೂತ್ರದ
ಸರ್ವದಾ ಸವಿಸಾರವ ನೋಡಿ ದಿವ್ಯನಾಮದ ೪

ಭಾವಕೆ ಭಾವಿಸುವದ್ಹಚ್ಚಿ ಭವನಾಶಗೈಸುವುದಕ್ಕೆ
ಶಿವಸುಖವಿದುರಿಡುವಾಂಗೆ ಜೀವ ಜೀವದಾ ೫

ಮನಸಿಗೆ ಮನಹಚ್ಚಿ ಮನೋನ್ಮನಮಾಡಿ
ಘನಸುಖದೊಳು ಬೆರೆದಾಡಿ ಅನುಭವಿಸಿ ನೋಡಿ ೬

ಗುರುವಿಗೆ ಗುರುವೆಂದರಿದು ನರದೇಹದ ಭಾವನೆಯ ಮರೆದು
ಕರಕೊ ಮಹಿಪತಿ ಇರುಳ್ಹಗಲೆ ಸ್ಮರಿಸಿದಾಕ್ಷಣ ೭

## ೫೯೯

ಅರ್ಥಿಯಾಗಿದೆ ಬನ್ನಿ ಅರ್ತು ನೋಡುವ ಗುರುಮೂರ್ತಿಯಿಂದ
ನಿರ್ತವಾಗಿ ಪೂರ್ಣಬೆರ್ತು ಕೂಡುವಾ ಬನ್ನಿ ಗುರ್ತದಿಂದ ಧ್ರುವ

ಸೂರ್ಯನಿಲ್ಲದ ಸೂಪ್ರಕಾಶ ತುಂಬೇದ ಹೇಳಲೇನ
ತೂರ್ಯಾವಸ್ಥೆಯೊಳು ಬೆರೆದು ಕೂಡಿದ ಜ್ಞಾನಿಬಲ್ಲ ಖೂನ
ಬರಿಯ ಮಾತನಾಡಿ ಹೊರಿಯ ಹೇಳುವದಲ್ಲ ಅರುವ್ಹೆಸ್ಥಾನ
ಪರಿಯಾಯದಿಂದ ಪರಿಣಿಮಿಸಿ ನೋಡಿ ಪರಮ ಪ್ರಾಣ ೧

ಚಂದ್ರನಿಲ್ಲದೆ ಬೆಳದಿಂಗಲು ಬಿದ್ದದ ಬಲು ಬಹಳ
ಇಂದ್ರಾದಿಕರೆಲ್ಲ ಹರುಷದಿ ನೋಡುವರು ಸರ್ವಕಾಲ
ಸುಂದ್ರವಾದ ಸುವಸ್ತುವಳಗೊಂದದೆ ಅಚಲ
ಸಾಂದ್ರವಾದ ಸುಖತುಂಬಿ ತುಳುಕತದೆ ಥಳ ಥಳ ೨

ಮನದ ಕೊನೆಯಲಿದ್ದ ಘನಸುಖ ನೋಡಿರೋ ನೆನೆದು ಬ್ಯಾಗ
ಸ್ವಾನುಭವದಲನುಭವಿಸುವದು ಬ್ರಹ್ಮಭೋಗ
ನಾ ನೀನೆಂಬುವ ಮಾತು ಏನು ತಾಳುವದಲ್ಲ ರಾಜಯೋಗ
ದೀನ ಮಹಿಪತಿಗೆ ತಾನೆತಾನಾದ ಸದ್ಗುರುವೀಗ ೩

## ೬೦೦

ಅಹುದಹುದೋ ಸ್ವಾಮಿ ಅಖಿಳ ಭುವನದೊಳು ನೀನೆವೊ
ಸುಹೃದಯದಲಿ ಸಾಕ್ಷಾತ ಸದ್ಗುರು ನೀ ಸುಲಭವೋ ಧ್ರುವ

ಥಳಥಳಗುಡುತ ಕಳೆಮಳೆಗಳು ಒಳಗೆ ಹೊರಗೆ
ನಿಮ್ಮದೇ ಹೊಳಹೋ
ಭಳ ಭಳ ಭಾಸುವ ಬೆಳಗಿನ ಬೆಳಗು, ಝಳಿಸುವ
ನಿಮ್ಮದೆ ಸುಳಿವು
ಸುಳಿ ಸುಳಿದಾಡುವ ನೆಲೆನಿಭ ನಿಜವಿದು ಒಳಿತಾಗ್ಯದೆ
ನಿಮ್ಮದೇ ಬಲವೊ
ಸಳ ಸಳ ಸುರಿಯುತ ತುಳುಕುತ ತುಂಬೇದ ಒಲವುತ
ನಿಮ್ಮ ದಯದೊಲವೊ ೧

ಘಮ ಘಮ ಸಾದನುಹಾತವು ಧಿಮಿಗುಡುತಿದೆ
ಬಲುತಾನವೋ
ಜುಮ್ಮು ಜುಮಗುಡುತಿದೆ ಝೇಂಕಾರವು ಸುಮ್ಮನೆ ಓಂಕಾರವೊ
ಝುಮ್ಮನೆ ಒಮ್ಮಿತಿಗ್ಹೆಳೆನಿಸುತಿರೆ ಬ್ರಹ್ಮಾನಂದದ ಘೋಷವೋ
ಉಮ್ಮೆಸ ಬಲು ತುಂಬ್ಯೆದೆಮ್ಮೊಳು ಬರುತದೆ ಒಮ್ಮನದಲಿ
ನಿಮ್ಮದೆವೊ ೨

ನಿಗಮಗೋಚರ ನಿಜವಸ್ತು ನೀನೆ ಭಗತರಿಗೆ ಸಹಕಾರವೊ
ಅಗಣಿತಗುಣ ಪರಿಪೂರ್ಣ ನೀನೆ ಸುಗುಣ ನಿರ್ಗುಣ
ನಿಜ ನೀನೆವೋ
ಸುಗಮ ಸುಪಥ ಸಜ್ಜನರಾನಂದ ಯೋಗಿಜನರನುಕೂಲವೋ
ಬಗೆ ಬಗೆ ಸದ್ಗೈಸಿದ ಮಹಿಪತಿಗುರು, ಝುಗಿಝುಗಿಸುವ
ಘನ ನೀನೆವೊ ೩

## ೬೦೧

ಆನೆ ಬಂತಿದಕೋ ಮಹಾಮದ್ದಾನೆ ಬಂತಿದಕೋ
ಸ್ವಾನಂದದಲಿ ಮೆಲ್ಲಮೆಲ್ಲನೆ ಅಡಿಗಳ
ತಾನಿಡು ತೊಲವುತಲಿ ನೋಡಮ್ಮ ಧ್ರುವ

ಕರಿಯ ಬಣ್ಣದಲೊಪ್ಪುತ
ಕಿರಿಗೂದಲು ಶಿರದಲಿ ಹೊಳೆವುತ
ಪೆರೆನೊಸಲೊಳು ಕೇಸರದ ಕಸ್ತೂರಿ ರೇಖೆ
ಕರುಣ ಭಾವದ ಕಂಗಳು ನೋಡಮ್ಮ ೧

ಝುಳಝುಳಿಪಂಬರದಿ ಘಣ ಘಣವೆಂಬ
ಚೆಲುವ ಗಂಟೆಯರವದಿ
ಒಲಿದು ತನ್ನಯ ನಿಜ ಶರಣರ ಅನುಮತ
ದಲಿ ನಲಿದಾಡುತಲಿ ನೋಡಮ್ಮ ೨

ದುಷ್ಟ ಜನರು ತೊಲಗಿ ಎನುತ ಮುಂದೆ
ಶಿಷ್ಟ ಜನರು ಒದಗಿ
ಅದ್ಧಹಾಸದಿ ಬಂದರಿದೆ ಮಹಿಪತಿ ಜನ
ಇಷ್ಟದೈವತ ಎನಿಪ ನೋಡಮ್ಮ ೩

## ೬೦೨

ಆನಂದವಾಗ್ಯೇದ ಸ್ವಾನಂದಯೋಗ
ಏನೆಂದ್ಹೇಳಲಿ ಸ್ವಾನುಭವದ ಸುಭೋಗ ಧ್ರುವ

ಸುಖಗರುತದ ಶಿಖಾಮಧ್ಯ ಸಂತ್ರಾಧಾರಿ
ಬೇಕಾದರೆ ನೋಡಿ ಷಕಚಕ್ರವೇರಿ

ಏಕೋಮಯವಾಗ್ಯದ ವಸ್ತು ಒಂದೇ ಸರಿ
ಲೋಕಪಾಲಕಸ್ವಾಮಿ ತಾ ಸಹಕಾರಿ ೧

ಜುಮ್ಮು ಜುಮ್ಮುಗುಡುತದೆ ರೋಮಾಂಚಗಳು
ಧಿಮಿ ಧಿಮಿಗುಡುತದೆ ನಾದಧ್ವನಿಗಳು
ಕ್ರಮ ತಿಳಿದರೆ ಭಾಸುತದೆ ಸುಳಹುಗಳು
ಸಂಭ್ರಮವಾದರು ಅನುಭವಿಗಳು ೨

ಕಳೆ ಮಳೆಮಿಂಚು ತುಂಬೇದ ಬಲು ಬಹಳ
ಹೊಳೆಯುತಲ್ಯದೆ ಸ್ವಸುಖದ ಕಲ್ಲೋಳ
ಝುಳಝುಳಿಸುತ ಜ್ಯೋತಿರ್ಮಯ ಥಳಥಳ
ತಿಳಕೊ ಮಹಿಪತಿ ಗುರುದಯದ ಸುಫಳ ೩

## ೬೦೩

ಅನಂದವಾಯಿತು ಸ್ವಾನಂದ ಘನಸುಖ
ತನುಮನದೊಳಗೆ ತನ್ನಿಂದ ತಾನೊಲಿದು
ಖೂನದೋರಿತು ಘನ ಗುರು ಕೃಪೆ ಎನಗೆ ೧

ಸೋಮಾರ್ಕದ ಮಧ್ಯಸ್ವಾಮಿ ಸದ್ಗುರು ಪಾದ
ನಮಿಸಿ ನಿಜದೋರಿತು
ಜುಮುಜುಮುಗಟ್ಟಿ ರೋಮಾಂಚನಗಳುಬ್ಬಿ
ಬ್ರಹ್ಮಾನಂದವಾಯಿತು ೨

ನಾಮ ಸೇವಿಸಿ ಮಹಿಪತಿಗೆ ಸವಿದೋರಿತು
ಪ್ರೇಮಭಾವನೆಯೊಳಗೆ ಧಿಮಿಧಿಮಿಗುಡುತ
ಬ್ರಹ್ಮಾನಂದದ ಸುಖ ಅನುಭವಿಸಿತೆನಗೆ ೩

## ೬೦೪

ಇಕ್ಕೊ ಇಲ್ಲೆ ಸಿಕ್ಕಿದ ಶ್ರೀಗುರು ಪರಬ್ರಹ್ಮ
ತೆಕ್ಕಿಸಿಕೊಂಬುವ ಬನ್ನಿ ಅಖರದಿ ನಮ್ಮ ಧ್ರುವ

ಎಂದಿಗೆ ಬಿಡಬಾರದಿನ್ನು ತಂದೆ ನಮ್ಮಪ್ಪನ
ಹೊಂದಿ ಸುಖಿಯಾಗಬೇಕು ಭಕ್ತಪಾಲಿಪನ
ವಂದಿಸಬೇಕಿಂದು ಸಹಸ್ರಳದಲಿಪ್ಪನ
ಸಂದೇಹವಿಲ್ಲದೆ ನೋಡಿ ಸ್ವರ್ಗಕೆ ಸೋಪಾನ ೧

ಹರುಷವಾಯಿತು ಎನಗೆ ಧರೆಯೊಳಿಂದು ನೋಡಿ
ಕರುಣಾಳು ಗುರುಮೂರ್ತಿಯ ಸ್ತುತಿಸ್ತವನ ಪಾಡಿ
ಎರಡಿಲ್ಲದೆ ಶ್ರೀಚರಣ ವರಕೃಪೆಯ ಬೇಡಿ
ಶಿರಸಾ ನಮಿಸಿದೆ ಗರ್ವಾಂಹಕಾರ ಈಡ್ಯಾಡಿ ೨

ಲೇಸುಲೇಸಾಯಿತು ನಮ್ಮ ವಾಸುದೇವನ ಕಂಡು
ಭಾಸ್ಕರಕೋಟಿ ತೇಜನ ಸ್ಮರಣೆಯ ಸವಿಯುಂಡು
ವಾಸನೆ ತೃಪ್ತ್ಯಾಯಿತು ಶ್ರೀಯೀಶನಾ ಮನಗಂಡು
ದಾಸಮಹಿಪತಿಗಾನಂದವಾಯಿತು ಸದ್ಗತಿ ಸೂರೆಗೊಂಡು ೩

## ೬೦೫

ಇಕ್ಕೊ ಇಲ್ಲೆ ಹರಿ ಇದ್ದಾನೆ ।
ಸಿಕ್ಕುವಾ ಸದ್ಗುರು ಕರುಣದಲಿ ಧ್ರುವ

ಆದಿ ಅನಾದಿಯ ಹಾದಿ ವಿಡಿದು ।
ಸಾಧಿಸಿ ನೋಡಿರಯ್ಯ ಸಜ್ಜನರು ।
ವೇದಾಂತದ ಸುಸಾರವಿದು ।
ಭೇದಿಸಿದವರಿಗೆ ಭಿನ್ನವಿಲ್ಲ ೧

ತನ್ನೊಳಗಾಗಿರಲಿಕ್ಕೆ ಭಿನ್ನವ್ಯಾಕೆ ।
ಚೆನ್ನಾಗಿ ನೋಡುವದು ಉನ್ಮನದಲಿ ।
ಇನ್ನೊಬ್ಬರಿಗೆ ತಾ ತಿಳಿಯದು ।
ಧನ್ಯವಾದರು ಅನುಭವಿಗಳು ೨

ಸೆರಗು ಸಿಲ್ಕಲಿಲ್ಲ ನಾಲ್ಕರಲಿ ।
ಅರಹು ಆಗಲಿಲ್ಲ ಆರರಲಿ ।
ಪೂರಿಸಲಿಲ್ಲ ಭಾವ ಮೂರಾಗಲಿ ।
ತೋರಿದ ಸದ್ಗುರು ಎನ್ನೊಳಗೆ ೩

ಮೋಸಹೋಯಿತು ಜಗ ವೇಷದಲಿ ।
ವಾಸತಿಳಿಯದೆ ವಾಸುದೇವನ ।
ಕಾಸಿನ ಆಶೆಗೆ ದಾಸರಾಗಿ ।
ಘಾಸಿ ಆಯಿತು ಭವಪಾಶದಲಿ ೪

ಸಣ್ಣದೊಡ್ಡದರೊಳು ಸಾಕ್ಷವಾಗಿ ।
ಬಣ್ಣ ಬಣ್ಣದಲಿ ತಾ ಭಾಸುತಿಹ್ಯ ।
ಕಣ್ಣಾರೆ ಕಂಡು ಗುರು ಕೃಪೆಯಿಂದ ।
ಧನ್ಯವಾದ ಮೂಢ ಮಹಿಪತಿಯು ೫

## ೬೦೬

ಇಕ್ಕೊ ಇಲ್ಲೆ ಹಾನೆ ಅಖಂಡವಾಗಿ ಸದ್ಗುರು ನಮ್ಮ
ಅಕ್ಕಿಸಿಕೋಬೇಕು ಗುಕ್ಕಿ ತನ್ನೊಳು ತಾ ಗುಹ್ಯವರ್ಮ ಧ್ರುವ

ಹೇಳಬಾರದು ಇನ್ನೊಬ್ಬರಗೀ ಮಾತು ಬಹಳ ಗೂಢ
ತಿಳಿದ ಮಹಿಪನೀವಾ ಲಕ್ಷಕೋಟಿಗೆ ಒಬ್ಬ ಪ್ರೌಢ
ಒಳಗುಟ್ಟಿನ ಕೀಲು ತಿಳಿಯಲಿಕ್ಕೆ ಮಾಡಿ ಮನದೃಢ
ಸುಳಹು ಕಂಡಮ್ಯಾಲೆ ಪ್ರಾಣಹೋದರೆ ಒಬ್ಬನು ಬಿಡಾ ೧

ದೂರಿಲ್ಲ ದೂರಿಲ್ಲ ತಿಳಿಕೊಳ್ಳಿ ಪೂರ್ಣ ಅರಿತು ಬ್ಯಾಗ
ತಿರುಗಿನೋಡಲು ತನ್ನೊಳು ದೋರುತಿದೆ ಬ್ರಹ್ಮಯೋಗ
ಸಾರವೇ ಸುಖಗರವುತದೆ ನೋಡಿರೋ ರಾಜಯೋಗ
ಪರದೆ ಇಲ್ಲದೆ ಗುರುತದೋರುವಾ ನೋಡಿ ಕಣ್ಣಾರೆ ಈಗ ೨

ಗುರುಕೃಪೆಯಿಂದ ಗುರುತಕ ದೂರಿಲ್ಲ ಕೊಳ್ಳಿ ಖೂನ
ಒಳಹೊರಗೆ ತುಂಬಿತುಳುಕುತದೆ ತಾನೆ ನಿಧಾನ
ತರಳ ಮಹಿಪತಿ ಸ್ವಾಮಿ ನೋಡಲಿಕ್ಕೆದ ಒಂದೆ ಸಾಧನ
ಸ್ವರೂಪರಿಯಲಿಕ್ಕೆ ಆಗುತ್ತದೆ ಬಲುಬ್ಯಾಗಲುನ್ಮನ ೩

## ೬೦೭

ಇಕ್ಕೊ ಘನಪರಬ್ರಹ್ಮದ ಬೆಳಗಿದು
ಶುಕಾದಿ ಮುನಿಗಳು ಸೇವಿಸುವದು ಧ್ರುವ

ಝುಗಝುಗಿಸುವ ಜಗಂಜ್ಯೋತಿಪ್ರಭೆಯಿದು
ಅಗಣಿತವರ್ಣ ಅನೇಕವಿದು
ಬಗೆಬಗೆಯಿಂದಲಿ ಹೊಳೆಯತಲಿಹುದು ಧಗಧಗಸುವ
ತೇಜಃಪುಂಜವಿದು ೧

ತುದಿಮೊದಲಿಲ್ಲದೆ ಸದಮಲ ಬ್ರಹ್ಮಿದು ಮೇದಿನಿಯೊಳು
ತಾ ತುಂಬಿಹುದು
ಉದಯಾಸ್ತಮಾನಗಳಿಲ್ಲದ ಬೆಳಗಿದು ಸದೋದಿತವಾದ
ಸುಬೋಧವಿದು ೨

ಅಸಿಪದಲಕ್ಷಣ ಅಸಾಧ್ಯಯೋಗಿದು ಪಾಶಬದ್ಧಕರಿಗೆ ಭಾಸಿಸದು
ಲೇಸಾಗಿ ಮಹಿಪತಿ ಸಾಧಿಸಿದು ಭಾಸ್ಕರಕೋಟಿ ಪ್ರಕಾಶವಿದು ೩

## ೬೦೮

ಇಕ್ಕೊ ನಮ್ಮಸ್ವಾಮಿ ಸಕಲಾಂತರ್ಯಾಮಿ
ಪ್ರಕಟ ಸಹಸ್ರನಾಮಿ ಭಕ್ತಜನ ಪ್ರೇಮಿ ಧ್ರುವ

ಒಳಗೆ ನೋಡಿ ನಿಮ್ಮ ಹೊಳೆವ ಪರಬ್ರಹ್ಮ
ತಿಳಿಯಲಿಕ್ಕೆ ನೋಡಿವರ್ಮ ಅಳಿಯಬೇಕು ಹಮ್ಮ ೧

ಸ್ವಸ್ತ ಮನಮಾಡಿ ವಸ್ತು ಇದೇ ನೋಡಿ
ಅಸ್ತವ್ಯಸ್ತ ಬ್ಯಾಡಿ ಸಾಭ್ಯಸ್ತ ನಿಜಗೂಡಿ ೨

ಬಿಟ್ಟು ನಿಜಖೂನ ಕೆಟ್ಟು ಹೋಗುದೇನ
ಗುಟ್ಟು ಮಹಿಪತಿಗಿದೆ ಮುಟ್ಟಿ ಗುರುಜ್ಞಾನ ೩

## ೬೦೯

ಇದು ಬಲು ಸೂಕ್ಷ್ಮ ಸದ್ಗತಿ ಸುಖಸಾಧನ ಧ್ರುವ

ಬಯಲಿಗೆ ನಿರ್ಬಯಲಾಗೇದ ಗುಹ್ಯಗೂಢಕೆ ಮೀರ್‍ಯದ
ಸೋಹ್ಯಸೊನ್ನಿದತ್ತಲದೆ ಕೈಯೊಳು ಸಿಲುಕದ ೧

ಧ್ಯಾನಮೋನಕ ದೂರ ಏನೆಂದ್ಹೇಳಲಿ ವಿಚಾರ
ಅನಂತಗುಣ ಅಪಾರ ಘನ ಪರಾತ್ಪರ ೨

ಕಣ್ಣಿನೊಳದೆ ಖೂನ ಧನ್ಯಗೈಸುವ ನಿಧಾನ
ಚೆಣ್ಣ ಮಹಿಪತಿಗೆ ಪ್ರಾಣ ಆನಂದ ಘನ ೩

## ೬೧೦

ಇದೇ ಇದೇ ಘನಸುಖಾ
ಸಾಧಿಸಿ ಗುರುಮುಖಾ ಧ್ರುವ

ಅಂಜದಾಲಿಸಿ ಕೇಳಿ ಪ್ರಾಂಜಳಾಗ್ಯದೆ
ಝಂ ಝಂ ಝಂ ಝಂ ಝಂ ಝಂ ಝಂಕರಿಸುತಲ್ಯದೆ ೧

ಒಂದೊಂದು ಪರಿಲ್ಯಾನಂದವುದೋರುತಲ್ಯದೆ
ಧೀಂ ಧೀಂ ಧೀಂ ಧೀಂ ಧೀಂ ಧೀಂ ಧೀಂಮಿಡುಗುತದೆ ೨

ಮನೋಹರಾಗುವ ಅನುಭವದೋರುತದೆ
ದೀನ ಮಹಿಪತಿಗೆ ಪಾವನಗೈಸುತದೆ ೩

## ೬೧೧

ಇದೇ ಇದೇ ಬ್ರಹ್ಮಮಯ ಸದಮಲಾನಂದೋದಯ
ಉದಯಾಸ್ತಮಾನವಿಲ್ಲದೆ ಸದೋದಿತ ಭಾಸುತಿದೆ ಧ್ರುವ

ವಸ್ತುವಿದೆ ನಿತ್ಯವಾದ ಅತ್ಯೋತ್ತಮಾನಂದಬೋಧ
ಎತ್ತ ನೋಡಿದರತ್ತ ಹತ್ತಿಲೆ ಸೂಸುತಲ್ಯದೆ ೧

ಸತ್ಯಸದಾನಂದೋಬ್ರಹ್ಮ ನಿತ್ಯತೃಪ್ತ ನಿರುಪಮ
ಅತ್ತಿತ್ತಲಾಗದೆ ಪೂರ್ಣಮತ್ತವಾಗ್ಯೆನ್ನೊಳಗದೆ ೨

ಏಕೋಮಯವಿದೆ ಸಹಜ ಪ್ರಕಟ ಗುಪಿತ ನಿಜ
ಸಕಲಾಗಮ ಪೂರಿತ ಶುಕಾದಿಗಳೂ ಸೇವಿತ ೩

ಸರ್ವಸಾಕ್ಷಿ ಸರ್ವಾಧಾರ ಸರ್ವರೊಳು ಸರ್ವೇಶ್ವರ
ಸರ್ವಮಿದಂ ಖಲುಬ್ರಹ್ಮವೆಂದು ಶ್ರುತಿ ಸಾರುತಿದೆ ೪

ಇಹಪರ ಪರಿಪೂರ್ಣ ಮಹಾಗುರು ನಿರಂಜನ
ಮಹಿಪತಿ ಬಾಹ್ಯಾಂತ್ರದೊಳು ಸಹಕಾರ ಸಾಕ್ಷಾತ್ಮವಿದೆ ೫

## ೬೧೨

ಇದೇ ಇದೇ ಬ್ರಹ್ಮಮಯ ಸದಮಲಾನಂದೋದಯ
ಸಾಧುಜನ ಹೃದಯ ಸದ್ಗುರು ದಯ ನಿಶ್ಚಯ ಧ್ರುವ

ಸಾರಿಚಲ್ದೆದ ಪೂರ್ಣ ಹರಿಯ ಸುಖ ನಿಧಾನ
ಸುರಮುನಿಗಳ ಪ್ರಾಣ ಶರಣಜನರಾಭರಣ ೧

ಬಣ್ಣಬಣ್ಣಭಾಸುವ ಪುಣ್ಯಶ್ಲೋಕರಾಜೀವ
ಸಣ್ಣ ದೊಡ್ಡದಲ್ಲೀವ್ಹ ಕಣ್ಣಿಗೆ ಕಾಣಿಸುವ ೨

ಗುಹ್ಯಕೆ ಗುಹ್ಯವಾದ ಮಹಾಮಹಿಮೆಯ ಬೋಧ
ಮಹಿಪತಿ ಸದ್ಗೈಸಿದ ಮಹಾಗುರು ಸುಪ್ರಸಾದ ೩

## ೬೧೩

ಇದೇ ಇದೇ ವಸ್ತು ಸನಾತನ ಒಂದೆ
ಆದಿ ಅನಾದಿಯಾಧಾರಿದರಿಂದೆ ಧ್ರುವ

ವೇದವಂದಿತ ವಸ್ತುವಿಮಲಾ
ಸಾಧುಜನರ ಸಾಧನೆಗನುಕೂಲಾ ೧

ಜ್ಞಾನವಿಜ್ಞಾನದ ನಿಜಸಾರಾ
ಅನುಭವಕನುಭವಾಗುವ ಸುಆಗರಾ ೨

ಸಗುಣ ನಿರ್ಗುಣಕಿದೆ ಮೂಲ
ಭಕ್ತಜನರು ಮಾಡುವುದು ಪ್ರತಿಪಾಲಾ ೩

ದೇವಾದಿಗಳು ಮಾಡುವರಿದೇ ಧ್ಯಾನಾ
ಭವಹರ ಗುರುಮೂರುತಿ ನಿಧಾನಾ ೪

ಇಹಪರ ಸುಖದೋರುದಿದೆ ನೀಟ
ಮಹಿಪತಿಸ್ವಾಮಿ ಶ್ರೀಗುರು ಮಣಿಮುಗುಟ ೫

## ೬೧೪

ಇದೇ ಇದೇ ಸದ್ವಸ್ತು ನಮ್ಮ ಇದೇ ಇದೇ ಧ್ರುವ

ನಿಗಮ ತಂದುಳುಹಿದ ಸುಗಮ ಸುವಸ್ತು ಇದೆ
ಜಗವು ಬೆನ್ನಿಲೆ ಪೊತ್ತು ನೆಗದದಿದೆ ೧

ಧೀರತನವನುದೋರಿ ಧಾರುಣಿಗೆದ್ದದು ಇದೆ
ನರಮೃಗನಾದ ನಿಜವಸ್ತುವಿದೆ ೨

ಮೇದಿನಿ ಅಳೆದು ಮೂರುಪಾದವ ಬೇಡಿದದಿದೆ
ಸಾಧಿಸಿ ಸಾಸಾರ್ಜುನನ ಮರ್ದಿಸಿದಿದೆ ೩

ರಾಕ್ಷಸರನೆಲ್ಲ ಕೊಂದು ಶಿಕ್ಷೆಯುಗೈಸಿದಿದೆ
ಪಕ್ಷಪಾಂಡವರಿಗ್ಯಾಗಿ ರಕ್ಷಿಸಿದಿದೆ ೪

ಬತ್ತಲೆ ಸುಳಿದು ಸತಿಯರ ವೃತವಳಿದುದಿದೆ
ಉತ್ತಮ ತೇಜಿನೇರುವ ರಾವುತನಿದೆ ೫

ಸಗುಣ ನಿರ್ಗುಣನಾದ ಜಗಜ್ಜೀವನವಿದೆ
ಅಗಣಿತಗುಣಗಮ್ಯ ಗೋಚರಿವಿದೆ ೬

ವಿಶ್ವತೋಮುಖನಾದ ವಿಶ್ವತೋಬಾಹುವಿದೆ
ವಿಶ್ವತೋಚಕ್ಷು ವಿಶ್ವರೂಪವಿದೆ ೭

ಮುನಿಗಳ ಪ್ರಿಯವಸ್ತು ಪರಾತ್ಪರವಿದೆ
ವಾಸವಾಗಿ ವಿಶ್ವದೊಳು ಭಾಸುವದಿದೆ ೮

ಲೇಸಾಗಿ ಪಾಲಿಸುತಿಹ್ಯ ದಾಸ ಮಹಿಪತಿಗಿದೆ
ಭಾಸ್ಕರ ಕೋಟಿ ಪ್ರಕಾಶ ವಸ್ತುವಿದೆ ೯

## ೬೧೫

ಇದೇ ಕೈವಲ್ಯ ಘನ ಸದಾನಂದೋ ಬ್ರಹ್ಮಸದ್ಗುರು
ಕೃಪೆಯ ಸುಜ್ಞಾನ
ಸದ್ಬಹ್ಮಾನಂದ ಸುಖ ಸದೋದಿತವಾಗಿಹ್ಯ
ಸಾಧುಜನರ ನಿಜಸ್ಥಾನ
ಉದಯಾಸ್ತಮಾನಗಳಿಲ್ಲದಾನಂದ ಪ್ರಭೆ ಸದ್ಗೈಸುತಿಹ ನಿಜಧ್ಯಾನ
ವೇದಾಂತದ ಸುಪಥ ಸಾರಸವಿದು ಸಾಧಿಸಿ ನೋಡಿ ಅನುದಿನ ೧

ಮಿರಿಮಿರಿ ಮಿಂಚುವ ಪರಿಪರಿ ಭಾಸುವ
ವರ್ಣದೋರುವದನೇಕ
ಥರಥರದಲಿ ತುಂಬಿ ಸಾಂದ್ರವಾಗಿದೋರುವ
ವರಮುನಿಗಳಿಗೆ ಕೌತುಕ
ಸುರಿಸುರಿದು ಸುರಿವ ಸೂರ್ಯಕೋಟಿ ಕಿರಣ
ಪರಿಪೂರ್ಣಗಿಹ್ಯ ಮೂರು ಲೋಕ
ತರುತರುವಾಯದಲಿ ತನುಮನದೊಳಗೆ
ದೋರುತಿಹದು ಬ್ರಹ್ಮಸುಖ ೨

ಕಣ್ಣಿಗೆ ಕಾಣಿಸಿ ಪುಣ್ಯಗೈಸುತಿಹುದು
ಎನ್ನೊಳಗಾನಂದ ಭರಿತ
ಏನೆಂದ್ಹೇಳಲಿ ಅನುಭವವಾನಂದಸುಖ
ಜನವನದೊಳು ತಾ ಸಾಕ್ಷಾತ
ಚೆನ್ನಾಗಿ ಗುರುಕೃಪೆಯಿಂದ ನೋಡಲಿಕ್ಕಾಗಿ
ತನ್ನೊಳಗದೆ ತಾ ಸ್ವಹಿತ
ಧನ್ಯಗೈಸಿತು ಮೂಢಮಹಿಪತಿ ಪ್ರಾಣ ಜೀವ
ಕೈವಲ್ಯನಿಧಿ ಗುರುನಾಥ ೩

## ೬೧೬

ಇನ್ನೇನಿನ್ನೇನು ಎನಗಿನ್ನು ಇನ್ನೇನಿನ್ನೇನು ಧ್ರುವ

ಎನ್ನೊಳು ಗುರು ತನ್ನ ಮರ್ಮವು ತೋರಿದ ಇನ್ನೇನಿನ್ನೇನು ೧

ಮುನ್ನಿನ ಕರ್ಮವು ನಿರ್ಮೂಲವಾಯಿತು ಇನ್ನೇನಿನ್ನೇನು ೨

ಎನ್ನೊಳು ಘನಬ್ರಹ್ಮವಸ್ತು ತಾನಾಯಿತು ಇನ್ನೇನಿನ್ನೇನು ೩

ನಾನು ನಾನೆಂಬುದು ನೆಲಿಯು ತಾನಾಯಿತು ಇನ್ನೇನಿನ್ನೇನು ೪

ಏನೆಂದು ತಿಳಿಯದ ಅನುಮಾನ ಗಳೆಯಿತು ಇನ್ನೇನಿನ್ನೇನು ೫

ಪರಮ ತತ್ವದ ಗತಿ ನೆಲೆ ನಿಭ ತೋರಿತು ಇನ್ನೇನಿನ್ನೇನು ೬

ಎನ್ನೊಳಾತ್ಮ ಖೂನ ಕುರುಹವು ತಿಳಿಯಿತು ಇನ್ನೇನಿನ್ನೇನು ೭

ಕನಸು ಮನಸು ಎಲ್ಲ ನಿನ್ನ ಸೇವೆ ಆಯಿತು ಇನ್ನೇನಿನ್ನೇನು ೮

ಹಗಲಿರುಳೆಂಬುದು ಹಗರಣವಾಯಿತು ಇನ್ನೇನಿನ್ನೇನು ೯

ಅರಹು ಮರಹಿನ ಇರುವು ತಿಳಿಯುತು ಇನ್ನೇನಿನ್ನೇನು ೧೦

ಭಾವದ ಬಯಲಾಟ ನಿಜವಾಗಿ ದೋರಿತು ಇನ್ನೇನಿನ್ನೇನು ೧೧

ಜೀವಶಿವನ ಗತಿ ಸೋಹ್ಯವು ತಿಳಿಯಿತು ಇನ್ನೇನಿನ್ನೇನು ೧೨

ಆಯವು ದಾಯವು ಸಾಹ್ಯವು ದೋರಿತು ಇನ್ನೇನಿನ್ನೇನು ೧೩

ಜೀವನ್ನ ಜಾತಿಯ ಕೀಲವು ತಿಳಿಯಿತು ಇನ್ನೇನಿನ್ನೇನು ೧೪

ಜನ್ಮ ಮರಣದಾ ಜಂತ್ರವು ಮುರಿಯಿತು ಇನ್ನೇನಿನ್ನೇನು ೧೫

ಸಂದೇಹ್ಯ ಸಂಕಲ್ಪ ಸೂಕ್ಷ್ಮವು ಹರಿಯಿತು ಇನ್ನೇನಿನ್ನೇನು ೧೬

ಮರಣದ ಗತಿಗಳ ಮಂತ್ರವು ತಿಳಿಯಿತು ಇನ್ನೇನಿನ್ನೇನು ೧೭

ಸುಷಮ್ನ ನಾಳದ ಸೂಕ್ಷ್ಮವು ದೋರಿತು ಇನ್ನೇನಿನ್ನೇನು ೧೮

ಇಮ್ಮನವಿದ್ದದು ಒಮ್ಮನವಾಯಿತು ಇನ್ನೇನಿನ್ನೇನು ೧೯

ಆಧಾರಚಕ್ರದ ಹಾದಿಯು ತಿಳಿಯಿತು ಇನ್ನೇನಿನ್ನೇನು ೨೦

ಸದ್ಗುರು ಕೃಪೆಯಾದಾ ಸಾಧನವಾಯಿತು ಇನ್ನೇನಿನ್ನೇನು ೨೧

ಭವಕೆ ಗುರಿಯಾಗುವ ಬಾಧೆಯ ಅಳಿಯಿತು
ಇನ್ನೇನಿನ್ನೇನು ೨೨

ಅಂತರಾತ್ಮನ ಸೂತ್ರಾಂತ್ರವು ತಿಳಿಯಿತು ಇನ್ನೇನಿನ್ನೇನು ೨೩

ಮಹಿಪತಿ ಜೀವನ್ನ ಪಾವನ್ನವಾಯಿತು
ಇನ್ನೇನಿನ್ನೇನು ೨೪

ಎನ್ನೊಳು ಭಾಸ್ಕರ ಗುರು ತಾನೆಯಾದನು ಇನ್ನೇನಿನ್ನೇನು ೨೫

## ೬೧೭

ಇಲ್ಲೆ ಉಂಟು ಮುಕುತಿ ನೋಡಿ ನೋಡಿ ಒಂದೆ ಮನದಲಿ
ಸುಲಭವಾಗಿ ದೋರುತಿಹ್ಯದು ಗುರುಕರುಣದಲಿ ಧ್ರುವ

ಏನುಹೇಳಲಿ ಸ್ವಾನುಭವ ಸುಖದ ಸಿದ್ಧಿಯ
ಜ್ಞಾನಿಬಲ್ಲ ಭಾಸುತಿಹ್ಯ ಸ್ವಕೀಲ ಸಿದ್ಧಿಯ

ಮನವ ಬಲಿದು ಮಾಡಿಕೊಳ್ಳಿ ಜ್ಞಾನಸಿದ್ಧಿಯ
ತನುವಿನೊಳು ದೋರುತೀಹ್ಯ ಶ್ರೀಗುರು ಸುಧೆಯ ೧

ನಿಟಿಲ ಭ್ರೂಮಧ್ಯ ದಾಟಿನೋಡಿ ಮುಕ್ತಿಯ
ದಿಟವಾಗಿ ಕೂಡಿ ಪ್ರಭಯ ಜ್ಞಾನ ಶಕ್ತಿಯ
ಕುಟಿಲವಲ್ಲ ಕೇಳಿ ಮಾತು ನಿಜಯುಕ್ತಿಯ
ನಟನೆ ತನ್ನೊಳು ದೋರುವ ಗುರುಭಕ್ತಿಯ ೨

ಲೇಸು ಲೇಸಾಯಿತು ಎನಗೆ ಭಾಸ್ಕರ ಕರುಣವು
ಭಾಸುತಿಹ್ಯದು ವಾಸುದೇವನ ಪುಣ್ಯಚರಣವು
ಮೋಸವಿಲ್ಲದೆ ನೀಗಿತು ಜೀವನ ಜನ್ಮಮರಣವು
ದಾಸ ಮಹಿಪತಿಗಾಯಿತು ಘನಸ್ಫುರಣವು ೩

## ೬೧೮

ಇಂಥಾದೆಲ್ಲದೆ ತಾಂ ನೋಡಿ ಸತ್ಸಂಗದಸುಖಾ ಇಂಥಾ
ಅಂಥಿಂಥವರಿಗಿಂಥಾದ್ಯೆಲ್ಲದೆ ನೋಡಿ ಧ್ರುವ

ಒಂದೊಂದುಪರಿ ಕೇಳಿಸುವ ಹ
ನ್ನೊಂದರ ಮ್ಯಾಲಿನ್ನೊಂದರ ಘೋಷ
ಧೀಂ ಧೀಂ ಧೀಂ ಧೀಂ ಧೀಂ ಧೀಂ
ಧೀಂ ಧೀಂ ಮಿಡುಗತಿಹ್ಯ ಆನಂದಸುಖ ೧

ಉದಯಾಸ್ತಿಲ್ಲದೆ ಬೆಳಗಿನ ಪ್ರಭೆಯು
ತುದಿಮೊದಲಿಲ್ಲದೆ ತುಂಬಿತು ಪೂರ್ಣ
ಬುಧಜನರನುದಿನ ಸೇವಿಸುತಿಹ್ಯ
ಸದಮಲವಾದ ಸದಾ ಸವಿಸುಖ ೨

ವಿಹಿತ ವಿವೇಕದ ಅನುಭವಗೂಡಿ
ಬಾಹ್ಯಾಂತ್ರದ ಘನದೋರುತಲಿಹ್ಯ
ಸ್ವಹಿತಸುಖದ ಸುಧಾರಸಗರೆವ
ಮಹಿಪತಿಗುರು ಕರಣದ ಕೌತುಕ ೩

## ೬೧೯

ಇಂದಿನ ದಿನ ಸುದಿನವಿದು ನೋಡಿ
ತಂದೆ ಸದ್ಗುರು ಕೀರ್ತಿಯ ಕೊಂಡಾಡಿ ಧ್ರುವ

ಸಾರ್ಥಕವಾಯಿತು ಜನ್ಮಕ ಬಂದು
ಕರ್ತು ಸದ್ಗುರು ಕರುಣವ ಪಡೆದಿಂದು
ಮರ್ತ್ಯವು ಮಾಯಾ ನೋಹದಸಂದು
ಅರ್ಥಿ ಆಯಿತು ಮನದೊಳು ನಮಗಿಂದು ೧

ಕೇಳಿದೆವು ಹರಿನಾಮದ ಘೋಷ
ಹೊಳೆಯಿತು ಮನದೊಳು ಅತಿ ಉಲ್ಹಾಸ
ಕಳೆದೆವು ಕತ್ತಲೆ ಜ್ಞಾನದ ದೋಷ
ಬೆಳಗಾಯಿತು ಗುರುಜ್ಞಾನ ಪ್ರಕಾಶ ೨

ಸೇವಿಸಿ ಸದ್ಗುರು ನಾಮಸುರಸ
ಆಯಿತು ಮನ ಚಿದ್ಘನ ಸಮರಸ
ಹೋಯಿತು ಭವಭಯದ ತಾ ಕ್ಲೇಶ
ಮಹಿಪತಿಗಾಯಿತು ಅತಿ ಸಂತೋಷ ೩

## ೬೨೦

ಇಂದು ಎನ್ನ ಜನುಮ ಸಾಫಲ್ಯವಾಯಿತು ।
ಬಂದು ಎನ್ನ ಮೊದಲೆ ಪುಣ್ಯ ಕೈಗೂಡಿತು ಧ್ರುವ

ಭಾನುಕೋಟಿ ತೇಜವಾಗಿ ರೂಪದೋರಿತು
ತಾನೆ ತನ್ನಿಂದೊಲಿದು ದಯವು ಬೀರಿತು
ಜ್ಞಾನ ಭಕುತಿ ವೈರಾಗ್ಯವನ್ನು ಅರುಹಿತು
ನಾನು ನೀನು ಎಂಬ ಅಹಂಭಾವ ಹರಿಯಿತು ೧

ಎಂದು ಇಂದಿರೇಶನ ಕಾಣದ ಕಣ್ಣದೆರೆಯಿತು
ಬಂದು ಬೀಳುವ ಭವಪಾಶದ ಬಲಿಯು ಹರಿಯಿತು
ಚಂದವಾಗಿ ಸದ್ಗುರು ಕರುಣ ಮಳೆಯು ಗರೆಯಿತು
ಹೊಂದಿ ಹರುಷ ಪಡುವಾನಂದ ಪಥವು ದೋರಿತು ೨

ಭಿನ್ನವಿಲ್ಲದೆ ಸಹಸ್ರದಳದಲ್ಯಾಡುವ ಹಂಸನ
ಕಣ್ಣು ಕಂಡು ಪಾವನವಾಯಿತು ವಾಸುದೇವನ
ಎನ್ನ ಮನಸಿನಂತಾಯಿತು ಪುಣ್ಯಸಾಧನೆ
ಧನ್ಯಗೈಸಿತು ಮಹಿಪತಿ ಪ್ರಾಣಜೀವನ ೩

## ೬೨೧

ಇಂದು ಕಂಡೆ ಕಣ್ಣಾರೆ ನನ್ನ ಸ್ವಾಮಿಯ
ಬಂದ ಜನ್ಮಸಾಫಲ್ಯವಾಯಿತೀಗ ಧ್ರುವ

ಮುಂಬಿಗಾಗ್ಯಾವೆನ್ನೊಳು ಸುಉಲ್ಲಾಸ
ಅಂಬುಜಾಕ್ಷನ ಕಂಡೆ ಸುಪ್ರಕಾಶ
ತುಂಬಿತುಳುಕುತಲ್ಯದ ಬಲುಹರುಷ
ಇಂಬುಸಾಲದು ಬ್ರಹ್ಮಾಂಡ ಆಕಾಶ ೧

ಎನ್ನಹೃದಯ ಮಂದಿರದೊಳು ನೋಡಿ
ತನ್ನಿಂದ ತಾಂ ಬಂದನು ದಯಮಾಡಿ
ಕಣ್ಣುಪಾರಣೆಗೈಸಿದೆನ್ನ ಕೂಡಿ
ಇನ್ನು ದಣಿಯದೆನ್ನಮನ ಕೊಂಡಾಡಿ ೨

ಘನ ಸುಖದೋರುತದೆ ಎನಗಿಂದು
ಭಾನುಕೋಟಿ ಉದಯವಾದನೆಂದು
ದೀನ ಮಹಿಪತಿಸ್ವಾಮಿ ಕೃಪಾಸಿಂಧು
ಮನೋಹರ ಮಾಡಿದ ತಾನೆ ಬಂದು ೩

## ೬೨೨

ಇಂದು ಕಂಡೆ ನಾ ಇಂದಿರಾಪತಿ
ತಂದೆ ತಾಯಿ ಗೋವಿಂದನ
ಬಂಧು ಬಳಗೆನಗೆಂದು ನಾ
ನಂದ ಕಂದ ಮುಕುಂದನ ೧

ಕಾಮಪೂರಿತ ಕಂಜಲೋಚನ
ಸ್ವಾಮಿ ಕಾವನ್ಯೆಯನ
ಸಾಮಗಾಯನ ಪ್ರಿಯನ
ಸೋಮಶೇಖರ ಧ್ಯೇಯನ ೨

ಸಾನುಕೂಲ ಸಕಲಕ ಸಾಧನ
ಭಾನುಕೋಟಿ ಪ್ರಕಾಶನ
ಜ್ಞಾನಗಮ್ಯ ವಿನಾಶನ
ದೀನ ಮಹಿಪತಿ ಈಶನ ೩

## ೬೨೩

ಇಂದು ಕೂಡಿದೆವು ನಿಜ
ಇಂದಿರೇಶನ ಇಂದು ಕೂಡಿದೆವು ನಿಜ ಧ್ರುವ

ಇಂದೆ ಕೂಡಿದೆವಯ್ಯ
ತಂದೆ ಸದ್ಗುರು ನಿಮ್ಮ
ಎಂದೆಂದಗಲದ್ಹಾಂಗ ದ್ವಂದ್ವ ಶ್ರೀಪಾದ ೧

ಕಂಡು ಪಾರಣಿಗಂಡು
ಪುಣ್ಯಗೈಸಿತು ಪ್ರಾಣ
ಧನ್ಯಗೈಸಿತು ಜೀವನ ಉನ್ಮನವಾಗಿ ೨

ಇಂದು ಕೂಡಿದೆವು
ಬಂಧುಬಳಗ ನಮ್ಮ
ಕಂದ ಮಹಿಪತಿಸ್ವಾಮಿಯಾ ಸಂದಿಸಿ ಪಾದ ೩

## ೬೨೪

ಇಂದು ಧನ್ಯವಾಯಿತು ಜನುಮ
ಬಂದು ಕೂಡಿದ ಘನ ಮಹಿಮ ಧ್ರುವ

ಏನು ಪುಣ್ಯ ಮಾಡಿದ್ದೆವೊ ಮೊದಲೆ
ಖೂನಗಂಡೆವೊ ಹರಿಯ ಮನದಲಿ
ಕಾಣದಿದ್ದೆವೊ ಏಸು ಜನ್ಮದಲಿ
ತಾನೆ ಒಲಿದು ಬಂದು ಸುಪ್ರಸನ್ನಲಿ ೧

ಬ್ರಹ್ಮಾದಿಕರಿಗೆ ದಾವ ದುರ್ಲಭ
ನಮ್ಮ ನೆನವಿನೊಳಾದವ ಸುಲಭ

ತಮ್ಮ ನಿಜಸುಖದ ನೆಲೆನಿಭ
ಬ್ರಹ್ಮಾನಂದ ದೋರಿದ ಪ್ರಾಣದೊಲ್ಲಭ ೨

ಖೂನದೋರಿತು ಮುನ್ನ ನಾ ಮಾಡಿದ
ಭಾನುಕೋಟಿತೇಜನ ಕೈಗೂಡಿದ
ಅನುಭವಾಮೃತಸಾರ ನೀಡಿದ
ದೀನ ಮಹಿಪತಿ ಮನೋಹರ ಮಾಡಿದ ೩

## ೬೨೫

ಇಂದು ಧರಿಯೊಳು ಬ್ರಹ್ಮಾನಂದವನು ತುಂಬಿ
ತುಳುಕತಿಹ್ಯಾನಂದಮಯ ಕಾಯದೊಳು ಕೌತುಕವು
ದೋರುತಿಹ್ಯ ಕರುಣಾಳು ಗುರುಮೂರ್ತಿ
ನಾದಬಿಂದು ಕಳಿಯಲಿ
ಸ್ತುತಿಸಲೆನ್ನಳವಲ್ಲ ಕ್ಷಿತಿಯೊಳು ಘನಮಹಿಮೆ
ಅತಿಹರುಷವನು ದೋರುತಿಹ್ಯ ಸದ್ಗತಿ ಸುಖವು
ಗುರು ಹಸ್ತಮಸ್ತ ಕದಿ ಕಂಡು ಜೀವನ ಮುಕ್ತನಾಗುವದು
ಗುರುದಾಸರು ೧

ಓಂಕಾರ ಮೊದಲಾದ ಶ್ರುತಿವೇದ ಘೋಷಗಳು
ಧಿಮಿಧಿಮಿಸುವ ಮಹಾಶಬ್ದಗಳು ವಾದ್ಯಗಳು
ಘೇಳೆನಿಸುವ ಶ್ರುತಿ ನಾದಗಳು ಭೇದಗಳು
ಕೇಳುವದು ನೀದೃಶ್ಯೆಲಿ
ಗರ್ಜಿಸುವ ಭೃಂಗಿಶಂಖನಾದ ಧ್ವನಿಯಗಳು
ಭೋರಿಡುವ ಭೇರಿ ಮೃದಂಗ ವೇಣಿಯಗಳು
ಚಿಣಿ ಚಿಣಿ ತಂತ್ರ ಮೊದಲಾದ ಸಂಕಾರಗಳು ಕೇಳಿ
ಪಾವನವಾದೆನು ೨

ಬೆರೆದು ನೋಡಲು ಅಂತರಾತ್ಮದೊಳು ಪ್ರಭೆಯಗಳು
ಥಳಥಳಿಸುವಾ ಮಹಾತೇಜಗಳು ಪುಂಜಗಳು
ಹೇಳಲಿನ್ನೇನದ ಹೊಳವಗಳು ಸುಳವಗಳು ನೋಡುವದು
ಅನಿಮಿಷದಲಿ
ರವಿ ಶಶಿ ತಾರೆಗಳು ಸೂಸುತಿಹ್ಯ ಕಿರಣಗಳು
ಭಾಸಿಸುವ ನಾನಾವರ್ಣಗಳು ಛಾಯಗಳು
ತುಂಬಿಹ ಬೆಳಗಿನ ಕಳೆಯಗಳು ಕಾಂತಿಗಳು ಕಂಡು
ಬೆರಗಾದೆನಿಂದ ೩

ವರ್ತಿಸುತ್ತಲಿಹ ಪ್ರವೃತ್ತಿ ನಿವೃತ್ತಿಗಳು
ಅಂತರಾತ್ಮದ ವಾಯುಸ್ತುತಿಯಗಳು ಗತಿಯಗಳು
ನುಡಿವ ಪ್ರಣಮ್ಯದ ಮಂತ್ರಗಳು ತಂತ್ರಗಳು
ತಿಳಿವದೀ ಪ್ರಣಮ್ಯಲಿ
ಸೂಸುತಿಹ ಶ್ವಾಸವುಚ್ಛ್ವಾಸನಿಯ ಭಾಸಿಗಳು
ಶೋಭಿಸುವ ಜೀವನದ ಮಂತ್ರ ಸರ ಮಾಲೆಗಳು
ಲೇಸುಲೇಸಾಗಿಹ ಜಪಗಳು ಜಾಗ್ರಗಳು ತಿಳಿದು
ಪಾವನವಾದೆನು ೪

ಕರದ್ವಯಂ ಮುಗಿದು ವರಗುರುಚರಣಕಮಲಕಿ
ನ್ನೆರಗಿ ಪರಮಾನಂದ ಹರುಷದಿ ಶಿರಸದಿ
ತ್ರಾಹಿ ತ್ರಾಹಿ ಎನುತ ಹೃದಯ ಕಮಲದಿ
ಶ್ರೀಗುರುಮೂರ್ತಿಯ ನೆನೆವೆನು
ಸದ್ಭಾವದಿಂದ ಸದ್ಗುರು ಪಾದಮಂಪಿಡಿದು
ಸದ್ಬ್ರಹ್ಮರಸದೊಳು ಮುಳುಗಿ ಸದ್ಭಕ್ತಿಯಲಿ
ಸದ್ಗತಿ ಸಾಧನವು ಸಾಧಿಸಿಹ್ಯ ಮಹಿಪತಿಯು ]
ಶ್ರೀ ಗುರುಕೃಪೆಯಲಿನ್ನು ೫

## ೬೨೬

ಇಂದು ನಮ್ಮನಿಲಿ ಬ್ರಹ್ಮಾನಂದ
ತಂದೆ ಸದ್ಗುರು ಸ್ವಾಮಿ ಕೃಪೆಯಿಂದ ಧ್ರುವ

ವಸ್ತುದಯ ಬೀರುವಾನಂದ ಪ್ರಸ್ತ
ಹಸ್ತ ಬಂದವರಿಗೆ ಸಾಧ್ಯಸ್ತ
ಪ್ರಸ್ತ ಉಂಟಾಗಿದೆ ನೋಡಿ ಸಮಸ್ತ
ಸ್ವಸ್ತ ಚಿತ್ತಲುಣಬೇಕು ಪ್ರಶಸ್ತ ೧

ಉಂಬುದಕನುಮಾನ ಮಾಡಬ್ಯಾಡಿ
ಕೊಂಬುದೆಲ್ಲ ಬಾಯಿದೆರೆದು ಬೇಡಿ
ತುಂಬಿತುಳುಕುತಲ್ಯಾನಂದ ನೋಡಿ
ಅಂಬುಜಾಕ್ಷನ ಸುಖಾಶ್ರಯ ಮಾಡಿ ೨

ಸ್ವಾನುಭವದ ಪ್ರಸ್ತ ಸರ್ವಕಾಲ
ತಾನೆ ತಾನಾಗಿ ದೋರುತದಚಲ
ದೀನಮಹಿಪತಿಗಾನಂದ ಸುಕಾಲ
ಭಾನುಕೋಟಿತೇಜ ದಾಸಾನುಕೂಲ ೩

## ೬೨೭

ಇಂದು ನಮ್ಮ ಮನಿಲಿ ಬ್ರಹ್ಮಾನಂದ
ಬಂದು ಭಾವ ಪೂರಿಸಿದ ಮುಕುಂದ ಧ್ರುವ

ಎನ್ನಮನಕೆ ಮಾಡಿದ ಮನೋಹರ
ಚೆನ್ನಾಗೊಲಿದು ದೋರಿದ ಸಹಕಾರ
ಮನ್ನಿಸೆನಗೆ ಬೀರಿದ ನಿಜಸಾರ
ಇನ್ನೊಬ್ಬರಿಗ್ಹೇಳುದಲ್ಲೀ ವಿಚಾರ ೧

ದಯದಿಂದ ಪಿಡಿದು ಎನ್ನ ಕೈಯ
ಶ್ರೇಯ ಸುಖ ನೀಡಿದ ಪ್ರಾಣಪ್ರಿಯ
ತ್ರಯ ಗುಣಾತೀತದ ಸುಖಾಶ್ರಯ
ತ್ರೈಲೋಕದೊಳೆನಗೆ ವಿಜಯ ೨

ಕಣ್ಣು ಪಾರಣಗೈಸಿದೆನ್ನ ನೋಡಿ
ಎನ್ನೊಳನುಭವಾಮೃತಸಾರ ನೀಡಿ
ಚಿಣ್ಣಮಹಿಪತಿ ಕೈವಶಗೂಡಿ
ಧನ್ಯಧನ್ಯಗೈಸಿದ ದಯಮಾಡಿ ೩

## ೬೨೮

ಇಂದು ನಮ್ಮನಿಯಲಿ ಆನಂದ ಬಂದ ನೋಡಿ ಮುಕುಂದ
ಸಂದಣಿ ಬಲು ಘನದೊಳವಿಲಿ ತುಂಬಿದೆ ತಂದೆ
ಗುರುಕೃಪೆಯಿಂದ ಧ್ರುವ

ಹೊಳೆಯುತ ಸುಳಿಯುತ ಉಲವುತಲ್ಯದೆ ತಾ
ಸದಮಲ ಸುಖಕಲ್ಲೋಳ
ಥಳಥಳಗುಡುತ ಮೊಳೆಮಿಂಚಿನ ಕಳೆ
ಬೆಳಗುದೋರುತಲ್ಯದೆ ಬಹಳ
ಹೇಳಲಳವಲ್ಲದು ಬಲುಸೂಕ್ಷ್ಮ ತಿಳಿದವ ತಾ ವಿರಳ
ಇಳೆಯೊಳು ನಿಜ ಆನಂದವು ದೋರಿತು ಸ್ವಾನುಭವಕ ಸುಕಾಲ ೧

ಕಣ್ಣು ಕಂಡು ಪಾರಣಿಗೈಯಿತು ತಾ ಚಿನುಮಯ
ಮಾಯವಗಂಡು
ಧನ್ಯಧನ್ಯಗೈಯಿತು ಜೀವನ ತಾ ಸನ್ಮತ ಸುಖಸವಿಗೊಂಡು
ಪುಣ್ಯರಥ ಪರಿಣಾಮದಲನುದಿನ ಮನಬೆರೆಯಿತು ನೆಲೆಗೊಂಡು
ಚೆನ್ನಾಯಿತು ಮನೋನ್ಮನದಲಿ ಘನಗುರು
ಸ್ಮರಣಿಯ ಸವಿದುಂಡು ೨

ಬಂದ ಮನೋಹರ ಮಾಡಲಿಕೆ ತಾ ಸ್ವಾಮಿ
ಸದ್ಗುರು ಎನ್ನೊಡೆಯ
ಚಂದವಾಯಿತು ಆನಂದದ ಸುಖವಿದು ಮಹಿಪತಿಗೆಡೆಯಡಿಯ
ಸಂದಹರೆವ ಜನ್ಮ ಮರಣದ ಹೇಳಿದ ತಾ ನಿಜನುಡಿಯ
ಹೊಂದಿ ಹರುಷಬಡುವಾನಂದವುದೋರುತಿದೆ ಸಿಲುಕಡಿಯ ೩

## ೬೨೯

ಇಂದು ನಮ್ಮಮನಿಲ್ಯಾನಂದ
ಇಂದಿರೇಶನೆ ಬಂದ
ಸಂದಲ್ಯಾಗೇದ ಸ್ವಾನಂದ
ಸಂದಿಸಿ ತುಂಬೇದ ಸುಖ ಸಾಂದ್ರ ಧ್ರುವ

ಅತಿಶಯಾನಂದ ಕಂದ
ಪತಿತಪಾವನ ಮುಕುಂದ
ಹಿತದೋರಲಿಕ್ಕೆ ಬಂದ
ಸತತ ಸುದಯದಿಂದ ೧

ಪುಣ್ಯದಿರಿಟ್ಟತು ಈಗ
ಎನ್ನೊಡಿಯ ಬಂದಾಗ
ಧನ್ಯಗೈಸಿದೆನಗೆ
ಚೆನ್ನಾಗಿ ಬಂದು ಮನೆಗೆ ೨

ಮನಮಂದಿರಕೆ ಬಂದ
ಅನುಕೂಲವಾಗಿ ಗೋವಿಂದ
ತಾನೆ ತಾನಾಗಿ ನಿಂದ
ಘನಗುರು ಕೃಪೆಯಿಂದ ೩

ಬಾಹ್ಯಾಂತ್ರ ಭಾಸುವ ಕ್ರಮ
ಮಹಾಗುರುವಿನ ಧರ್ಮ
ಮಹಿಪತಿಯ ಸಂಭ್ರಮ
ಇಹಪರಾನಂದೋಬ್ರಹ್ಮ ೪

## ೬೩೦

ಇಂದು ನಮ್ಮ ಮನಿಲ್ಯಾನಂದೋಬ್ರಹ್ಮಾ
ತಂದೆ ಸದ್ಗುರು ದಯ ಏನೆಂದ್ಹೇಳಲಿ ಸಂಭ್ರಮ ಧ್ರುವ

ಹರುಷ ತುಂಬೇದ ಬಹಳ ತೆರವಿಲ್ಲೆಳ್ಳಷ್ಟು ಸ್ಥಳ
ಸಿರಿಯನಾಳ್ವ ದಯಾಳ ಹರಿ ಬಂದಾನೆ ಕೃಪಾಳ ೧

ಸೂಸುತಲಿ ಸಂತೋಷ ಪಸರಿಸ್ಯದ ಉಲ್ಹಾಸ
ಭಾಸುತಾನೆ ಸರ್ವೇಶ ಭಾಸ್ಕರ ಕೋಟಿ ಪ್ರಕಾಶ ೨

ಪ್ರಾಣಕಾಗೇದ ಪ್ರಸ್ತ ಮನಕಾಗೇದ ತಾಂ ಸ್ವಸ್ತ
ಸಲಅನುಭವದ ಸುವಸ್ತ ಖೂನಾಗಿ ಬಂದು ಸಾಭ್ಯಸ್ತ ೩

ಹೇಳಲಿಕ್ಕಳವಲ್ಲ ಹೊಳವ ಸುಖದ ಸೊಲ್ಲ
ತಿಳಿದ ಮಹಿಮೆ ಬಲ್ಲ ಸುಳವು ಸೂಕ್ಷ್ಮವೆಲ್ಲ ೪

ಕರ್ತುತಾಂ ದಯಮಾಡಿ ಅರ್ತು ಬಂದೊಡಮೂಡಿ
ಆರ್ಥಿಯಿಂದೆವೆ ನೋಡಿ ಬೆರ್ತು ಮಹಿಪತಿಕೂಡಿ ೫

## ೬೩೧

ಇಂದು ನೋಡುವ ಇಂದಿರಾಪತಿ ಶ್ರೀಪಾದವ
ಎಂದೆಂದು ಬಿಡದೆ ಮನದಲಿ
ತಂದೆ ಮುಕುಂದನ ಹೊಂದಿ ಭಜಿಸುವ ಧ್ರುವ

ಭಾವಭಕುತಿಗಳ ವಿಡಿವ
ಭವಬಂಧನದ ಪಾಶ ಕಡಿವ
ದಿವಾರಾತ್ರಿಯಲಿ ಹರುಷಬಡುವ
ಕಾವಕರುಣನ ಕೃಪೆಯ ಪಡೆವ ೧

ಮನಕರಗಿ ಮೈಯ್ಯಮರೆವ
ಘನಸುಖದ ಸುಸ್ಮರಣೆಯಲಿರುವ
ಆನಂದಮಯಸ್ವರೂಪದಿ ಬೆರೆಯುವ
ತನುಮನವು ಶ್ರೀಹರಿ ಗೊಪ್ಪಿಸುವ ೨

ಎರಗಿ ಏಕವಾಗಿ ನೊಡುವ
ಹರಿಚರಣದಿ ಬೆರೆದು ಕೊಡುವ
ಪರಮಗತಿ ಸಾಯೋಜ್ಯಪಡುವ
ಧರೆಯೊಳು ನಲಿ ನಲಿದಾಡುವ ೩

## ೬೩೨

ಇಂದು ಮಂಗಳಕರ ದೋರಿತು ಎನಗೆ ಪ

ಇಂದು ಮಂಗಳಕರ ದೋರಿತು ಎನಗೆ ।
ಇಂದು ಕುಲದೀಪಕ ಬಂದನು ಮನೆಗೆ ೧

ಮಂಗಳ ಮಹಿಮಾನಂಗ ಜನಕ । ಶ್ರೀ
ರಂಗ ಬಂದನಂತರಂಗದೊಳಾಡುತ ೨

ಇಂದಿರಾಪತಿ ಬಂದನು ಸುಖಬೀರುತ ।
ತಂದೆ ತಾಯಿ ಬಂಧು ಬಳಗೆನಗಾಗುತ ೩

ತುಂಬಿ ತುಳುಕುತಾನಂದದೊಲವಿಲಿ ।
ಅಂಬುಜಾಕ್ಷ ಬಂದಾಮೃತಗರೆವುತ ೪

ಎಂದೆಂದೆಗನಾನಂದದ ಮೂರುತಿ ।
ಕಂದ ಮಹೀಪತಿಗಾಗಿ ಬಂದನು ಸಾರಥಿ ೫

## ೬೩೩

ಇಂದು ಸುಕಾಲ ಸುಪರ್ವಕಾಲ ಧ್ರುವ

ಇಂದು ಸುಕಾಲ ಇಂದು ಸುಕಾಲ
ಇಂದು ಸುಕಾಲ ಸುಪರ್ವಕಾಲ ೧

ಇಂದು ಸುಕಾಲ ಬಂದ ಗೋಪಾಲ
ಸಂಧಿಸಿ ಮನದೊಳಗಾದನುಕೂಲ ೨

ಇಂದು ಸುದಿನ ಇಂದು ಸುದಿನ
ಚಂದವಾಯಿತು ಎನ್ನಮನ ಉನ್ಮನ ೩

ನೀಡಿದ ಭಿಕ್ಷೆ ನೋಡುವ ಲಕ್ಷ
ಒಡಿಯ ಪೂರಿಸಿದ ಬೇಡುವಪೇಕ್ಷ ೪

ಇಂದು ಆನಂದ ಇಂದು ಆನಂದ
ಹೊಂದಿ ಮಹಿಪತಿಗುರುಪಾದಾರವಿಂದ ೫

## ೬೩೪

ಇಂದು ಸುದಿನ ಶುಭದಿವಸ ನೋಡಿ
ಬಂದು ಕೂಡಿದ ಸದ್ಗುರು ದಯಮಾಡಿ ಧ್ರುವ

ಮುನ್ನ ಮಾಡಿದ ಸುಪಣ್ಯ ಒದಗಿತು
ಭಿನ್ನವಿಲ್ಲದೆ ಸುಚಿನ್ಹ ಹೊಳೆಯಿತು

ಧನ್ಯಗೈಸುವ ಸುಫಲದೋರಿತು
ಎನ್ನ ಜನುಮ ಸಾಫಲ್ಯವಾಯಿತು ೧

ಸ್ವಾಮಿ ಕಂಡೆ ಕಣ್ಣಿನೊಳಂತರಂಗ
ಬ್ರಹ್ಮಾನಂದ ಭಾಸುತದೆ ಸರ್ವಾಂಗ
ಸಮಾರಂಭದೋರುತದೆ ಸುಸಂಗ
ಒಮ್ಮಿಂದೊಮ್ಮೆ ಬಂದ ನೋಡಿ ಶ್ರೀರಂಗ ೨

ಗುಹ್ಯ ಒಡೆದು ಹೇಳಲು ಸುವಿಚಾರ
ದಯವಿಟ್ಟು ಬಂದ ನೋಡಿದರ
ಇಹಪರಕೆ ಸದ್ಗುರು ಸಹಕಾರ
ಮಹಿಪತಿಗೆ ಮಾಡಿದ ಮನೋಹರ ೩

## ೬೩೫

ಇಂದು ಸುದಿವಸ ನೋಡಿ ಕಂಡೆವು ಕಣ್ಣಾರೆ
ಚಂದವಾಗಿ ಗುರು ಪೂರ್ಣಮಾಡಿದ ಮನೋಹರ ಧ್ರುವ

ಕೇಳದಾ ಕೇಳಿದೆವು ಫೇಳಿಸುವದೆನ್ನೊಳಗೆ
ಹೇಳೇನೆಂದರೆ ಬಾರದು ಸುಳವು ಇನ್ನೊಬ್ಬರಿಗೆ
ತಾಳಮೃದಂಗ ಭೇರಿ ಭೋರಿಡುತ ಒಳ ಹೊರಗೆ
ತಿಳಿದೇನಂದರದೇ ನೋಡಿ ಉಲುವು ತಾ ತನ್ನೊಳಗೆ ೧

ಕಾಣದ ಕಂಡೆವು ಖೂನ ತಾ ಕಣ್ಣಿನ ಕೊನೆಯೊಳಗೆ
ಪ್ರಾಣ ಪಾವನ್ನವಾಯಿತು ಪುಣ್ಯ ಪ್ರಭೆಯೊಳಗೆ
ಭಾನುಕೋಟಿತೇಜ ಧನ್ಯಗೈಸಿದ ಎನಗೆ
ಸ್ವಾನುಭವದ ಸುಖ ಎದುರಿಟ್ಟಿತು ಜಗದೊಳಗೆ ೨

ನುಡಿಯು ಕೇಳಿದಂಥ ನುಡಿಗೇಳಿದೆವಿಂದು
ಕಡಿಗಾಯಿತು ನೋಡಿ ಹುಟ್ಟಿಬಾಯ ಜನ್ಮಸಂದು
ವಿಡಿದು ಗುರುಪಾದ ಜನ್ಮಸಾರ್ಥಕಾಯಿತಿಂದು
ಪಡೆದ ಮಹಿಪತಿ ನಿಜಾನಂದ ವಸ್ತುವಂದು ೩

## ೬೩೬

ಇಂದು ಹೊಳೆವುತದೆ ಸುಚಿನ್ಹಬೋಧ
ತಂದಿ ಕಂಡೇವೇನೊ ಸದ್ಗುರು ಶ್ರೀಪಾದ ಧ್ರುವ

ಪ್ರಾಣದೊಡಿಯ ಬಾವ್ಹಾಂಗನೇನೊ
ಪೂರ್ಣಕ್ಷಣಕೊಮ್ಮಾಗುತದೆ ಸುಶಕುನ
ಕಣ್ಣುಬ್ಬಾರುತದೆ ಬಲದೆನ್ನ
ಚೆನ್ನಾಗ್ಯಾಗಮ್ಮ ತಾನೇನೊ ಸುಪ್ರಸನ್ನ ೧

ತೋಳಭುಜಹಾರುತದೆ ಬಲುಬಹಳ
ವ್ಯಾಳ್ಯಕೊದಗಿಬಂದೆನೇನೊ ದಯಾಳ
ಸುಳವುದೋರುತದೆ ನಿಶ್ಚಳ
ಸುಳಿದೊಮ್ಮೆ ಬಂದನೇನೊ ಕೃಪಾಳ ೨

ಬುದ್ಧಿ ಮನಸಿಗಾಗುತದೆ ವಿಕಾಸ
ಸಿದ್ಧಿಸೋರುವ್ಹಾಗಾದೆ ಪ್ರಕಾಶ
ಸದ್ಯ ಹೃದಯವಾಗುತದೆ ಉಲ್ಹಾಸ
ಸಾಧ್ಯವಾಗುವ್ಹಾಂಗ್ಹಾನೇನೊ ತಾ ಸರ್ವೇಶ ೩

ಪ್ರೇಮ ಉಕ್ಕಿಬರುದೆನ್ನೊಳಗೆ
ಸ್ವಾಮಿದರುಷಣಾದೀತೇನೊ ತಾ ಈಗ
ರೋಮರೋಮವು ಬಿಡದೆ ಎನಗೆ
ಬ್ರಹ್ಮಾನಂದ ಭಾಸುತದೇನೊ ಬ್ಯಾಗ ೪

ಖೂನದೋರಿಬರುತದೆನಗೊಂದು
ಭಾನುಕೋಟಿ ತೇಜ ತಾ ಬಾವ್ಹಾಂಗಿಂದು
ದೀನ ಮಹಿಪತಿಗುರು ಕೃಪಾಸಿಂಧು
ಮನೋಹರ ಮಾಡುವ್ಹಾಂಗ್ಹಾನೆ ಬಂದು ೫

## ೬೩೭

ಇಂದೆನ್ನ ಜನ್ಮ ಪಾವನವಾಯಿತು
ತಂದೆ ಶ್ರೀಗುರು ನಿಮ್ಮ ಚರಣ ದರುಶನದಿ ಧ್ರುವ

ಅರ್ಕ ಮಂಡಲಗಳು ರವಿಶಶಿ ಕಿರಣವು
ಝಳಝಳಿಸುವ ಪ್ರಭೆ ನೋಡಿ ಅನಿಮಿಷದಾದೃಷ್ಟಿಲೆನ್ನ
ಲಕ್ಷಿಯೊಳು ಸಾಕ್ಷಾತ್ವಸ್ತು ಗತಿಯು ನಿಮ್ಮ
ಪ್ರಕಾಶವನು ಕಂಡಾಂಧತ್ವಗಳದಿನ್ನು ೧

ಓಂಕಾರ ಮೊದಲಾದ ದ್ವಾದಶ ನಾದದಾ
ಭೇದದಾ ಘೋಷವನು ಕೇಳಿನ್ನೀ ದೃಶ್ಯದಾ ಕರ್ಣಲೆನ್ನಾ
ಲಯಲೀಲೆಯೊಳು ಸಾದೃಶ್ಯ ಮೂರ್ತಿಯು ನಿಮ್ಮ
ಶ್ರುತಿಗಳು ಕೇಳಿ ಬಧಿರತ್ವವಾಗಳಿದಿನ್ನು ೨

ಇಪ್ಪತ್ತೊಂದು ಸಾವಿರ ಆರುನೂರದಾ
ಜಪವನ್ನು ತಿಳಿದು ಪ್ರಣಮ್ಯಲೆನ್ನ
ಸುಷಮ್ನದೊಳು ಪ್ರಾಣೇಶ ಮೂರ್ತಿ ನಿಮ್ಮ
ಮಂತ್ರವನು ತಿಳಿದು ಪಿಶಾಚತ್ವ ಕಳೆದಿನ್ನು ೩

ಸ್ತುತಿ ಸ್ತೋತ್ರ ಸ್ಮರಿಸುವ ದಿವ್ಯನಾಮಾಮೃತವ
ನುಡಿದು ಪಯಸ್ವನೀ ಜಿಹ್ವೆಲೆನ್ನ
ಸ್ಮರಣಿ ಚಿಂತನೆಯೊಳು ಸ್ಥುರಣ ಮೂರ್ತಿ ನಿಮ್ಮ
ಸ್ಮರಿತ ಗತಿವರಿತು ಮೂಕತ್ವ ಕಳೆದಿನ್ನು ೪

ಚಿನ್ಮಯ ಚಿದ್ರೂಪ ಕಂಡು ಬೆರಗಾಗಿ ಮನ
ಭ್ರಾಂತಿ ಅಜ್ಞಾನವನ್ನು ಜರಿಯಲೆನ್ನ
ಏಕೋದೇವ ಈತ ವಿಶ್ವಾತ್ಮ ಹಂಸನೆಂದು
ಸಂದೇಹ ಸಂಕಲ್ಪ ಬಾಧೆಯಾಗಳದಿನ್ನು ೫

ಭಕ್ತಿ ಮುಕ್ತಿ ಉದಾರಿ ಆತ್ಮದಲಿ ಸಾರಿದೋರಿ
ನಿಜ ಬೋಧಾಮೃತ ಬೆರೆದು ತಾರಿಸಲೆನ್ನ
ಗರ್ಭಪಾಶದ ಬಲಿಯು ಹರಿದು ಧರೆಯೊಳಿನ್ನು
ಉತ್ಪತ್ತಿ ಸ್ಥಿತಿ ಲಯದ ಬೀಜವನ್ನು ಹುರಿದಿನ್ನು ೬

ಭಾಸ್ಕರಸ್ವಾಮಿಯ ಕರುಣಾಳು ಮೂರ್ತಿಯ
ಮೂಢ ಮಹಿಪತಿಯ ಕೃಪಾಂಬುಧಿಯು
ಕರುಣದಭಯ ಹಸ್ತವನು ಶಿರಸದಲ್ಲಿಡಲಾಗಿ
ಧನ್ಯನಾದೆನು ಸತಿಪತಿ ಸಹಿತವಾಗಿನ್ನು ೭

## ೬೩೮

ಈ ಮಹಿಮೆಗೆ ಏನೆನಬಹುದು ಧ್ರುವ

ರೂಪವಿಲ್ಲದೆ ರೂಪಾಗಿ ರೂಪಕ ಅರೂಪನಾದ
ಅಪಾ ಮೂರು ಲೋಕಕ ಚಿದ್ರೂಪನಾದ ಮೂರ್ತಿಗೆ ೧

ಸರ್ವರೊಳು ಸಾಕ್ಷವಾಗಿ ನಿರ್ವಿಕಲ್ಪ ನಿರ್ಗುಣಿ ತಾ
ನಿರ್ವಿಕಾರನಾದ ನಿರ್ಭರ ನಿರ್ವಿಶೇಷಗೆ ೨

ಭಾವಕ ಸ್ವಭಾವನಾದ ಪವಿತ್ರಪಾವನನೀತ
ಭವನಾಶಗೈಸಿದ ಮಹಿಪತಿ ಗುರುಮೂರ್ತಿಗೆ ೩

## ೬೩೯

ಉದಯವಾಯಿತು ಹೃದಯ ಕಮಲದೊಳಗೆ ಧ್ರುವ

ಗುರುಕರುಣಾನಂದಬೋಧ ಅರುಣೋದಯವಾಯಿತು
ಸ್ಮರಣೆಗರವು ದೊರೆಯಿತು ಹರಿಯ ಚರಣದ ೧

ಸಮ್ಯಜ್ಞಾನದ ಪ್ರಭೆ ಸಮ್ಯವಾಗಿದೋರಿತು
ತಾಮಸನಿದ್ರೆ ಹರಿಯಿತು ತಿಮಿರಾಂಧದ ೨

ಥಳಥಳಿಸುವ ರವಿಕೋಟಿ ಬೆಳಗಾಯಿತು
ಹೊಳೆಯುತ ತೇಜೋನ್ಮಯವು ಒಳಗೊರಗೆಲ್ಲ ೩

ಒದಗಿ ಬಂತೆದುರಿಟ್ಟು ಮೊದಲೆ ಪುಣ್ಯದ ಫಲ
ಉದಯವಾಯಿತದೃಷ್ಟವು ಸದೃಷ್ಟವಾಗಿ ೪

ಸದ್ಗತಿ ಸುಖವಿದು ಸದೋದಿತವಾಯಿತು
ಸಾಧಿಸಿ ಮಹಿಪತಿಗೆ ಸದ್ಗುರು ಕೃಪೆಯು ೫

## ೬೪೦

ಏನೆಂದ್ಹೇಳಲಿ ಕಂಡದನುಭವನಾ ಅನುಭವನಾ
ಸ್ವಾನಂದ ಸುಖಸದೋದಿತ ಸುಸಾಧನ ಧ್ರುವ

ಘಮಿಘಮಿಸುವ ರವಿಕೋಟಿತೇಜನ
ಠವಿಠವಿಸುದ ಕಂಡ್ಯೆ ದಿವ್ಯಸ್ವರೂಪನ
ಸವಿಸವಿ ಸುರುವ ಸುಖಸಂಬ್ರಹ್ಮನನು
ಸೇವಿಸುವದು ಕಂಡೆ ಶುಕಮುನಿಜನ ೧

ಥಳಥಳಿಸುವ ತೇಜೋಮಯ ನಿಧಾನ
ಝುಳಝುಳಿಸುದು ಕಂಡೆ ಹೊಳೆವ ಪ್ರಕಾಶನ
ಒಳಹೊರಗೊಂದೇಪರಿ ಭಾಸುವ ಗುಣ
ಹೇಳಲಿನ್ನೇನದ ಸುಳವ್ಹು ಸೂಕ್ಷ್ಮನ ೨

ಸಣ್ಣದೊಡ್ಡಾರೊಳಿಹ್ಯ ವಸ್ತುನಿರ್ಗುಣ
ಬಣ್ಣಬಣ್ಣದಿ ಕಂಡ ಗುರುಸ್ವರೂಪನ
ಕಣ್ಣಾರೆ ಕಂಡೆ ಸದ್ಗುರು ಚರಣ
ಧನ್ಯಧನ್ಯವಾಯಿತು ಮಹಿಪತಿ ಜೀವನ ೩

## ೬೪೧

ಏನೆಂದ್ಹೇಳಲಿ ಸ್ವಾನಂದ ಘನ ಸುಖವು ಧ್ರುವ

ಮಾತಿನಂತಲ್ಲ ಜ್ಯೋತಿರ್ಮಯದ ಸುಖ
ನೇತಿ ನೇತಿವೆಂಬುದು ಶ್ರುತಿವಚನ ೧

ಹೋಲಿಕೆಯ ಮಾತಿಗಿದು ಕೇಳು ಸಿಲುಕುವುದಿಲ್ಲ
ಮೂಲ ತಿಳಿದವನೆ ಬಲ್ಲ ಮ್ಯಾಲೆ ಮಂದಿರದ ೨

ಅರವು ಅಂಜನೆ ಇಟ್ಟ ಗುರು ಕೃಪೆಯಿಂದ ನಿಜ
ಗುರುತು ಕಂಡವನೆ ಬಲ್ಲ ಹರಿಮಹಿಮೆಯ ೩

ಸ್ವಾನುಭವದ ಸುಖಜ್ಞಾನಿಗಳಿಗಲ್ಲದೆ
ನೀನು ನಾನೆಂಬವರಿಗೆ ಖೂನ ತಿಳಿಯದು ೪

ಮನಕರಿಗಿ ಮಹಿಪತಿ ಘನ ಬೆರೆದ ಗುರುತ
ಏನೋ ಎಂತೋ ತಿಳಿ ಮಾತ ಆನಂದಭರಿತ ೫

## ೬೪೨

ಏನೆಂದ್ಹೇಳಲಿ ಸ್ವಾನಂದ ಮಹಿಮೆಯು
ಏನೆಂದ್ಹೇಳಲಿ ಮಾ ಧ್ರುವ

ವೇದಲ್ಲ ವಾದಲ್ಲ ಭೇದಮಾಡುವದಲ್ಲ
ಸಾಧಕರಿಗೆ ತಾ ಸಿಲುಕುದುಮಾ
ಓದಲ್ಲ ಶೋಧಲ್ಲ ಗಾದಿಯ ಮಾತಲ್ಲ
ಭೇದಿಸಿದರೆ ತಾನು ತಿಳಿವದು ಮಾ ೧

ಧ್ಯಾನಲ್ಲ ಮೋನಲ್ಲ ಸ್ನಾನ ಸಂಧ್ಯಾನಲ್ಲ
ಜ್ಞಾನಹೀನರಿಗಿದು ತಿಳಿಯದು ಮಾ
ನಾನಲ್ಲ ನೀನಲ್ಲ ನಾನುಡಿದ ಮಾತಲ್ಲ
ಅನುಭವ ಸಿದ್ಧನು ಬಲ್ಲನು ಮಾ ೨

ಸೇವಲ್ಲ ಸೂತ್ರಲ್ಲ ಬಾಹ್ಯನೋಟಿಕೆ ಅಲ್ಲ
ಮಹಿಪತಿ ನಿನ್ನೊಳು ತಿಳಿವದು ಮಾ
ಕೌತುಕವನು ಕಂಡು ಮಹಾ ಗುರುಕೃಪೆಯಿಂದ
ಸಾಯೋಜ್ಯ ಸದ್ಗತಿ ಪಡೆವದು ಮಾ ೩

## ೬೪೩

ಎನೊ ಎಂತೊ ತಿಳಿಯದು ತಿಳಿಯದು
ಸ್ವಾನಂದದ ಸುಖದಾಟ ಧ್ರುವ

ಒಳಗೊ ಹೊರಗೊ ಬೈಗೊ ಬೆಳಗೊ
ಕಾಳೊ ಬೆಳದಿಂಗಳವೊ
ಮಳಿಯೊ ಮಿಂಚೊ ಹೊಳವೊ ಸಳವೊ
ತಿಳಿಯದ ಕಳೆಕಾಂತಿಗಳು ೧

ಉದಿಯೊ ಅಸ್ತೊ ಆದ್ಯೊ ಅಂತ್ಯೊ
ಮಧ್ಯೋ ತಾ ತಿಳಿಯದು
ತುದಿಮೊದಲಿಲ್ಲದೆ ಸದಮಲ ಬ್ರಹ್ಮವು
ಉದಿಯವಾಗಿಹ್ಯದು ನೊಡಿ ೨

ಜೀವ್ರೋ ಭಾವ್ರೋ ಶಿವ್ರೊ ಶಕ್ತ್ರೋ
ಆವದು ತಾ ತಿಳಿಯದು
ಘವಘವಿಸುವ ಅವಿನಾಶನ ಪ್ರಭೆಯಿದು
ಮಹಿಪತಿ ವಸ್ತುಮಯವೊ ೩

## ೬೪೪

ಏಸು ಜನ್ಮದಲೇನು ಪುಣ್ಯಮಾಡಿದೆವೊ
ಲೇಸಾಗಿನ್ನು ಸ್ವಾಮಿ ನಿಮ್ಮನ ಕಂಡೆವೊ ಧ್ರುವ

ಸಾಧನವೆಂಥಾದೆಂಬುದು ನಾವಿನ್ನರಿಯೆವೊ
ನಿಮ್ಮ ದರುಶನದಲಿ ಪಾವನಾದೆವೊ
ಇದೆ ಸಕಲ ಸಾಧನದ ಸುಫಲವೊ
ಸ್ವಾಮಿ ನಿಮ್ಮ ದಯಕ ಸಾನುಕೂಲವೊ ೧

ಮನೋಹರ ಮೋಹನಮೂರ್ತಿ ಕಂಡೆವೊ
ಕೃಷ್ಣ ನಿಮ್ಮನ ಬಿಗಿದಪ್ಪಿಕೊಂಡೆವೊ
ನಾನಾಸವಿಯ ನೆಲೆಗಳೂಟ ಉಂಡೆವೊ
ಎಂದೂ ಬಿಡದೆ ಹೃದಯಲಿಟ್ಟುಕೊಂಡೆವೊ ೨

ಹೆಣ್ಣು ಪ್ರಾಣಿಗಳು ನಾವೇನು ಬಲ್ಲಿವೊ
ನಿಮ್ಮ ವಿನಾ ಇನ್ನೊಂದು ನಾವೊಲ್ಲಿವೊ
ಚನ್ನಾಗೊಲಿದ ಭಾನುಕೋಟಿ ನಮ್ಮಲ್ಲಿವೊ
ಚಿಣ್ಣಮಹಿಪತಿಗಿದೆ ಸಾಫಲ್ಯವೊ ೩

## ೬೪೫

ಕಣ್ಣಹಬ್ಬವಾಯಿತು ಇಂದು ಆನಂದ ಬ್ರಹ್ಮದಾಟವು
ಕಣ್ಣಿಲೆ ಕಂಡಿತು ಧ್ರುವ

ಕಣ್ಣಿಗೆ ಕಾಣಿಸದಿನ್ನೊಂದು ಕಣ್ಣಿನೊಳಗೆ ಕಣ್ಣಿ
ಆಯಿತು ವಸ್ತು ಒಂದು
ಕಣ್ಣಿಗೆ ಕಣ್ಣು ಕಾಣಬಂದು ಕಾಣಿಸಿ ನಿಜಪುಣ್ಯಗೈಸಿತು ಎನಗಿಂದು ೧

ಕಣ್ಣಿನೊಳುದೋರಿತು ಖೂನ ಭಿನ್ನವಿಲ್ಲದೆ
ಹೊಳೆಯುತಿಹ್ಯದು ನಿಜಘನ
ಕಣ್ಣಿಗಾಯಿತು ನಿಜಧ್ಯಾನ ಕಣ್ಣಿಗೆ ಕಣ್ಣು
ನೋಡಲಿಕ್ಕಾಯಿತುನ್ಮನ ೨

ಕಣ್ಣಿಗೆ ಕಣ್ಣೀಭಾವವಾದ ಕಣ್ಣಿನೊಳಗೆ ಚೆನ್ನಾಗಿ
ಕಣ್ಣುಗುರುತಾದ
ಕಣ್ಣೀಉಂಡಿತು ಸವಿಸ್ವಾದ ಚಿಣ್ಣಮಹಿಪತಿಗಾಯಿತು
ಪೂರ್ಣಗುರುಬೋಧ ೩

## ೬೪೬

ಕಣ್ಣ ಹಬ್ಬವಾಯಿತು ಎನಗಿಂದು
ಧನ್ಯಧನ್ಯಗೈಸಿದ ದೀನಬಂಧು ಧ್ರುವ

ತುಂಬಿತುಳುಕುತಲ್ಯದ ಬ್ರಹ್ಮಾನಂದ
ಹಂಬಲಿಟ್ಟು ನೋಡನುಭವದಿಂದ
ಗುಂಭಗುರತವಾಗದೇ ನಿಜಾನಂದ
ನಂಬಿ ನಡಿಯಲಿಕ್ಕಿದೆ ಬಲು ಚಂದ ೧

ಕಣ್ಣು ಮುಚ್ಚಿನೋಡಲು ಖೂನಗೊಟ್ಟು
ಪುಣ್ಯ ಹೊಳೆಯುತಲ್ಯದೆ ಎದುರಿಟ್ಟು
ಎನ್ನ ಮ್ಯಾಲೆ ಸದ್ಗುರು ದಯವಿಟ್ಟು
ಚಿನ್ನುಮಯದೋರಿದ ನಿಜಗುಟ್ಟು ೨

ಹೇಳಲಿನ್ನೇನದನುಭವಸುಖಾ
ಥಳಥಳಗುಡುತದೆ ಕೌತುಕಾ
ಕೇಳಿಕೋ ಬೇಕಿದುವೆ ಗುರುಮುಖಾ
ಹೇಳಿಕುಡುವ ಮಹಿಪತಿಗುರು ಥೋಕಾ ೩

## ೬೪೭

ಕಣ್ಣಾರೆ ಕಂಡೆ ಕೈವಲ್ಯ ಮನದ ವೈಶಾಲ್ಯ ಧ್ರುವ

ಅದ್ವೈತಾಗಮ್ಯಗೋಚರನದ್ವಿತೀಯ
ಅಧ್ಯಾತ್ಮ ವಿದ್ಯದಾಗರ ಸಿದ್ಧರಪ್ರಿಯ
ಸದ್ಗತಿ ಸುಖಸಾಗರ ಸದ್ಗುಣಾಲಯ
ಬುಧಜನರ ಸಹಕಾರ ಬೋಧ ಪೂರ್ಣೋದಯ ೧

ಆದಿತ್ಯಕೋಟಿ ಪ್ರಕಾಶ ಸದೋದಿತ
ಸಾಧು ಹೃದಯನಿವಾಸ ಭೇದಾತೀತ
ಶುದ್ಧಾತ್ಮ ಸುಖಸಂತೋಷ ಸದಾ ಸುಶಾಂತ
ಸದಮಲಾನಂದಘೋಷ ಆದಿದೇವ ಸಾಕ್ಷಾತ ೨

ಕೈವಲ್ಯನಿಧಿ ನಿಶ್ಚಯ ದೇವಾಧಿದೇವ
ಅವಿನಾಶ ಪದ ಅಕ್ಷಯ ಶ್ರೀವಾಸುದೇವ
ಭವಾತ್ಮ ಭಜಕಹೃದಯ ಸರ್ವರೊಳಿ ಹ್ಯ
ಬಾಹ್ಯಾಂತ್ರ ಭಾಸುತಿಹ್ಯ ಮಹಿಪತಿ ಮನದೈವ ೩

## ೬೪೮

ಕಣ್ಣಾರೆ ಕಂಡೆವಯ್ಯಾ ಕಣ್ಣಾರೆ ನಾ ಧ್ರುವ

ಕಣ್ಣಾರೆ ಕಂಡೆ ಹರಿಯ ಎನ್ನ ಪ್ರಾಣಧೊರಿಯ
ಧನ್ಯಗೈಸಿದ ಪರಿಯ ಏನೆಂದ್ಹೇಳಲಯ್ಯ ೧

ಕಾಣಲಿಕ್ಕೆನ್ನಮನ ತಾನೆ ಆಯಿತು
ಸ್ವಾನುಭವದ ಖೂನ ಜನಕ್ಹೇಳಲೇನು ೨

ಆಡೇನಂದರ ಅಮಾತು ನಾಡಿಗೇನು ತಿಳದೀತು
ಪಡೆದವಗೆ ದೋರಿತು ಬಿಡದ್ಹಾಂಗಾದೀತು ೩

ಗುರುಕರುಣ ಕಟಾಕ್ಷ ಗುರುತಾಗ್ಯದ್ಯನ್ನಪೇಕ್ಷಾ
ಇರುಳ್ಹಗಲೆ ದೋರುವದಧ್ಯಕ್ಷ ೪

ಎನಗದೆ ಬ್ರಹ್ಮಾನಂದ ಭಾನುಕೋಟಿ ತೇಜನಿಂದ
ದೀನಮಹಿಪತಿ ಬಂದ ಅನುಭವ ಆನಂದ ೫

## ೬೪೯

ಕಣ್ಣಾರೆ ಕಂಡೆವು ಚಿನ್ಮಯದ ರೂಪ ಕಣ್ಣಾರೆ ಕಂಡೆವು ಮಾ ಧ್ರುವ

ಕಣ್ಣೊಳಗಿಹುದು ಕಾಣಿಸಿಕೊಳ್ಳುದು ಕಣ್ಣಿಗೆ ಕಣ್ಣಾಗಿ
ದೋರುವದು ಮಾ
ಕಣ್ಣಿನೊಳಗಿನ್ನು ಕಣ್ಣಾರೆ ಕಾಣುವ ಜಾಣರಿಗೆ
ಪೂರ್ಣಗೈಸುವದು ಮಾ ೧

ಕೇಳಿಕೀಲಿಹುದು ಕೇಳಿಸಗೊಡದು ಕೇಳಿಕೆಯೆ
ತಾನಾಗಿಹುದು ಮಾ
ಕೇಳಿಕೆಯೊಳಿನ್ನು ಕೇಳಲು ಕಿವಿಗೊಟ್ಟು ಘೇಳಿನಿಸುತ
ಘೋಷಗೈವದು ಮಾ ೨

ಆಡುತ ಮಾಡುತ ಆಡಗುತಲಿಹುದು ಗೂಢಗುಹ್ಯವಾಗಿ
ದೋರುದು ಮಾ
ನೋಡೇನೆಂದರೆ ತನ್ನ ಗೂಡಿನೊಳಗದೆ ಹಿಡದೇನೆಂದರೆ
ಕೈಗೂಡದು ಮಾ ೩

ಥಳಥಳಗುಡುತ ಹೊಳೆವುತಲಿಹುದು ಸುಳವು ತನ್ನ
ತಿಳಿಯಗೊಡದು ಮಾ
ಒಲಿದೇನೆಂದರೆ ತನ್ನ ನೆಲೆನಭ ದೋರುತ ಒಳಹೊರಗೆ
ತಾನೆ ಭಾಸುದು ಮಾ ೪

ಉತ್ತಮರೊಳಗೆ ಅತ್ಯಂತವಾಗಿನ್ನು ಅತ್ತಿತ್ತಲಾಗದೆ ಇಹುದು ಮಾ
ನಿತ್ಯ ನಿಜವಾದ ವಸ್ತು ಮಹಿಪತಿ
ಹೃತ್ಕಮಲದೊಳು ಕಂಡೆನು ಮಾ ೫

## ೬೫೦

ಕಣ್ಣಾರೆ ಕಂಡೆವಿಂದು ಪುಣ್ಯತೇಜೋರಾಶಿಯ
ಬಣ್ಣಬಣ್ಣದಲಿ ಭಾಸುವ ಪ್ರಭೆಯ ಧ್ರುವ

ಹೇಳಲಿಕ್ಕೆ ಬಾರದು ಹೊಳೆವ ಪ್ರಕಾಶವು
ಥಳಥಳಿಸುತಿಹುದು ಒಳಹೊರಗೆ
ಝಳಿಝಳಿಸುತಿಹದು ಮೊಳೆಮಿಂಚಿನ ಪರಿ
ಸುಳವ್ದೋರಿತು ಕಳೆವರದೊಳಗೆ ೧

ಒದಗಿಬಂತಿದಿರಿಟ್ಟು ಮೊದಲಿನ ಪುಣ್ಯದ ಫಲ
ಸಾಧಿಸಿ ಕಂಡೆ ಸುಖಸದೋದಿತವ
ಹಾದಿ ಸಿಲ್ಕಿತು ನೋಡಿ ಆದಿ ಅನಾದಿಯ
ಭೇದಿಸಿತು ಮನಸು ನಿಜಬೋಧವ ೨

ಭಾವ ಬಲಿದು ನೋಡಿ ದೇವಾಧಿದೇವನ
ಸುವಿದ್ಯ ಸುರಸವ ಸವಿಸವಿದು
ಪಾವನ್ನವಾಯಿತು ಮಹಿಪತಿ ಜೀವನವು
ಕಾವಕರುಣ ಗುರುದಯದಿಂದ ೩

## ೬೫೧

ಕಪಟನಾಟಕನೀತ ಕೃಪಾಸಿಂಧು ಸಾಕ್ಷಾತ ಧ್ರುವ

ಸಗುಣ ಸುಪಥ ದೋರಿ ನಿರ್ಗುಣನಾಗಿಹ ಶ್ರೀಹರಿ
ಅಗಣಿತ ಗುಣದೋರುವ ಅನೇಕಾಪರಿ ಜಗದೊಳು ಮುರಾರಿ ೧

ಹಿಡಿದೇನೆಂದರೆ ಸಿಲುಕ ಗೂಡಿನೊಳಗೆ ಮಾಡಿಹ್ಯ ಮಲಕ
ನೋಡೇನೆಂದರೆ ಭಕ್ತಿಗೆ ನಿಲುಕ ಒಡಿಯ ಗೋಪಾಲಕ ೨

ಕುಲಗಳ್ಳಗೆ ಕೊಡುವ ಮ್ಯಾಲೆ ಹುಯಲು ತಾ ಮಾಡುವ
ಮೂಲೋಕದೊಳು ನೆಲೆಯು ತಿಳಿಯಗೊಡದೆ ಇರುವ
ಬಲುಖಳ ದೈವ ೩

ಭಾಷೆ ಕೊಟ್ಟರೆ ತಪ್ಪ ಋಷಿ ಮುನಿಗಳ ಪಾಲಿಪ
ಭಾಸುತ ಭಕ್ತರ ಹೃದಯದೊಳಗಿಪ್ಪ ಭಾಸ್ಕರ ಸ್ವರೂಪ ೪

ಗುಹ್ಯ ಆಗೋಚರ ಸೋಹ್ಯ ತಿಳಿಯಲು ಸಾಕ್ಷಾತ್ಕಾರ
ಮಹಿಪತಿ ಸ್ವಾಮಿ ಶ್ರೀರು ಗುರು ಬಾಹ್ಯಾಂತರ
ಇಹಪರ ಸಹಕಾರ ೫

## ೬೫೨

ಕಾಮಧೇನುಗರವುತಲ್ಯದೆ ನಮ್ಮ ಮನಿಯಲಿ ನೋಡಿ
ಬ್ರಹ್ಮಾನಂದದೋರುತದೆ ಪರಮಾಮೃತ ಸೂರ್‍ಯಾಡಿ ಧ್ರುವ

ಭೋರ್ಗರೆವುತಲ್ಯದೆ ಇರುಳ ಹಗಲಿ ತಾ ಕರಕೊಳ್ಳಲಿ ವಶವಲ್ಲ
ಮುರುವಿಡದೆ ಸುರಿವುತಲ್ಯದೆ ಅಮೃತ ದುರುಳರಿಗಿದು ಅರಿಕಿಲ್ಲ
ಸುರಿ ಸುರಿದು ಸಾರಾಯ ಚಪ್ಪರಿದನುಭವ ನಿಜಸುಖ ತಾ ಬಲ್ಲ
ಸುರಮುನಿಜನರಾನಂದದಿ ಸೇವಿಸಿ ಅರಹುತರಾದರು ಎಲ್ಲ ೧

ಕಾಸಿ ಕಡಿಯದೇ ಭಾಸುತಲ್ಯದೆ ಲೇಸಾಗಿ ನವನೀತ
ಮೋಸಹೋಗದನುಸರಿಸಿಕೊಂಬುದು ವಸುಧಿಯೊಳಗೆ ತ್ವರಿತ
ಹಸನಾಗುವ ಹೊಸಪರಿಯಲಿ ಸೇವಿಸಿ
ಋಷಿಮುನಿಗಳು ಸ್ವಹಿತ
ತುಸುಕೊರತಿಲ್ಲದೆ ಪಸರಿಸಿ ತುಂಬೆದ ವಿಶ್ವದೊಳಗೆ ಸನ್ಮತ ೨

ಕೈಗೊಟ್ಟಿತು ಕರಕೊಳ್ಳಲಿ ಅನುದಿನ ಮಹಿಪತಿಗಿದು ನಿಜ ನೋಡಿ
ಮಯಿ ಮರೆದನುಸಾರಾಯನ ಸೇವಿಸಿ
ಮಹಾಮಹಿಮೆಯ ಸವಿಗೂಡಿ
ದಯಮಾಡಿದ ಮಹಾಗುರು ಭಾಸ್ಕರಮುನಿ
ಶಿರದಲಭಯವ ನೀಡಿ
ಇಹಪರದೊಳು ಗುರುನಾಮವೆ ಕಾಮಧೇನುವಿದೆ ಕೊಂಡಾಡಿ ೩

## ೬೫೩

ಕಂಡರ ಕಾಣಬೇಕು ಮಂಡಲ ದೊಡೆಯನ
ತುಂಡ ಮುಂಡಾಗ್ಹೋಗುದು ಖಂಡಿ ತಾಗ್ಯನುಮಾನ ಧ್ರುವ

ಕಾಣುವದೊಂದೆ ಖೂನ ಜ್ಞಾನಾಗಬೇಕು ಪೂರ್ಣ
ಸ್ವಾನುಭವದ ಸ್ಥಾನ ತಾನೆ ಗುರು ನಿಧಾನ ೧

ಸಾಧಿಸಲಿಕ್ಕ್ಯುಪಾಯ ಇದೆ ಸದ್ಗುರು ಕೈಯ
ಬೋಧಿಸುವ ನಮ್ಮಯ್ಯ ಆದಿತತ್ವದ್ಹಾದಿಯ ೨

ತನ್ನಿಂದ ತಾನೆ ಎಂದು ಕಣ್ಣಿನೊಳಾದ ಸಿಂದು
ಧನ್ಯಗೈಸಿದ ಮಹಿಪತಿ ಗುರು ಕೃಪಾಸಿಂಧು ೩

## ೬೫೪

ಕಂಡು ಕಾಣಬೇಕು ಪಿಂಡ ಬ್ರಹ್ಮಾಂಡದೊಡೆಯನ ಧ್ರುವ

ಹಿಂದು ಮಾತಾಡಿನ್ನೇನು ಕಂಡು ಕಾಣುವದೇ ಖೂನ
ಮಂದಿಯ ಮರೆಯಲಿಹ್ಯ ಮಂಡಲೇಶನ ೧

ಷಡರಸನ್ನದ ಖೂನ ಬಡಿಸಿಟ್ಟದೆ ನಿಧಾನ
ಒಡಲು ತುಂಬಿದ ಪೂರ್ಣ ಒಡಂಬಡದು ಪ್ರಾಣ ೨

ದಿಂಡಿಲಿಟ್ಟದೆ ವಸ್ತ್ರ ಥಂಡಥಂಡಾದ ವಿಚಿತ್ರ
ಕೊಂಡು ತೊಡುದಲ್ಲದೆ ಗಾತ್ರ ಬಡದು ಸಂತೃಪ್ತಿ ೩

ಸಂದುಕದಲ್ಲಿಟ್ಟದೆ ವಸ್ತು ಸುಂದರವಾದ ಸಮಸ್ತ
ಸಂಧಿ ಸಿಡದೆ ಸಾಭ್ಯಸ್ತ ಹೊಡೆದು ಮನ ಸ್ವಸ್ತ ೪

ಗಂಟಿಲಿಟ್ಟದೆ ಧನ ಕಂಟಲೆ ತುಂಬಿ ನಿಧಾನ
ಕೊಟ್ಟು ಕೊಂಡಾದರೆ ಪೂರ್ಣಕಟ್ಟಿದು ಕಾಮನ ೫

ಕೂಪಲ್ಯಾದೆ ಉದಕ ಅಪೂರ್ವದ ಅಮೋಲಕ
ಅರ್ಪಿಸಿಕೊಳ್ಳದನಕ ತೃಪ್ತಿಹೊಂದದು ಲೋಕ ೬

ಕಂಡು ಕಾಣದೆ ಮನ ಖಂಡಿಸಿತು ಅನುಮಾನ
ಕೊಂಡಾಡು ಮಹಿಪತಿ ಪೂರ್ಣ ಉಂಡುಟ್ಟು ಘನ ೭

## ೬೫೫

ಕಂಡು ಕಾಣಿರೊ ಕಾಣಿಸುವನ
ಕಂಡು ಕಾಣಿಸುವನ ಖೂನ
ಖಂಡ ಮಾಡುವದಿದೆ ಸುಜ್ಞಾನ ಧ್ರುವ

ಕಾಣಿಸುವನ ಕಾಣದೆ ಖೂನ ಜಾಣತನದಲ್ಹೇಳುವದೇನ
ಜ್ಞಾನಗಮ್ಯವಾದ ಸ್ಥಾನ ಮನೋನ್ಮನದಲಿ ನೋಡಿ ನಿಧಾನ ೧

ಸ್ವಾನು ಭವದ ಸುರಸನೋಟ ಧ್ಯಾನಧಾರಣಕಿದೆ ನೀಟ
ಅನುದಿನದಲ್ಯಾನಂದ ಆಟ ಮುನಿಜನರ ಸುಕಾಲದೂಟ ೨

ನೋಡುವ ನೋಟ ನಿಜ ಮಾಡಿ ಮೂಢ ಮಹಿಪತಿ
ಸ್ವಾಮಿಯ ನೋಡಿ
ಒಡನೆ ಬಾಹ ಕೈಗೂಡಿ ನೋಡುದರೊಳು ತಾನೆ ಒಡಮೂಡಿ ೩

## ೬೫೬

ಕಂಡು ಕಾಣುವನ ಕಂಡು ಕಾಣಿ ಖೂನ
ಕಂಡ ಮ್ಯಾಲ ಖಂಡ ಮಾಡಿಕೊಂಬುದೆ ಸುಜ್ಞಾನ ಧ್ರುವ

ಕಾಣುವನು ಕಾಣಿಯೇನಾಗಿದೊ ಪ್ರಾಣಿ
ಕಾಣದೆ ಹೋದರನೇಕ ಜನ್ಮ ನಾನಾಯೋನಿ ೧

ಕಾಣುವನ ಸ್ಥಾನ ಕಾಣದಿಹುದೇನ
ಜ್ಞಾನಗುರುವಿನ ಕೈಯ ಕೇಳಿಕೊ ನೀ ಖೂನ ೨

ಕಂಡು ಕಾಂಬುವನ ಅಖಂಡ ಮಾಡೋಧ್ಯಾನ
ಪಿಂಡ ಬ್ರಹ್ಮಾಂಡಕ್ಕೆ ಇದೆ ವಸ್ತು ನಿಜಘನ ೩

ಕಾಣುವನ ಕೂಡಿ ಸ್ವಾನುಭವ ಮಾಡಿ
ದೀನ ಮಹಿಪತಿಗಿದೆ ಘನ ಸುಖನೋಡಿ ೪

## ೬೫೭

ಕಂಡು ಕೌತುಕ ಕಾಯದೊಳಗಿನಾಶ್ರಯ ಸಾಧನ
ಕೊಂಡಾಡಲೆಷ್ಟೆಂದು ನಾ ಧ್ರುವ

ಏಳು ಮೂರೆರಡು ನಾದಗಳು ಪರಿಪರಿಗಳುಕೇಳಬರುತಲ್ಯದ
ತಾಳಮೃದಂಗ ಭೇರಿಗಳು ಸುಘೋಷಗಳು ಕೇಳಗುಡುತಲ್ಯದ ೧

ಒಳಗೆ ಕಂಡೆ ನಾ ರಾಶಿ ಬೆಳಗಿನ ಮಳೆ ಮಿಂಚಿನ
ತಳದ್ಥಿಡಿದು ತುಂಬೇದ
ಕಳೆಕಾಂತಿ ರವಿಕೋಟಿ ಕಿರಣ ತೇಜಃಸ್ಫುರಣ ಥಳಥಳಗುಡುತ್ಯದ ೨

ಮಂಗಳಕರದಾನಂದೋದಯ ಮಹದಾಶ್ರಯ
ರಂಗಮಯದೋರುತ್ಯದ
ಅಂಗದೊಳಗೆ ಮಹಿಪತಿಯ ಸುಸಾರಥಿಯ
ಸಂಗಸುಖ ಬೀರುತ್ಯದ ೩

## ೬೫೮

ಕಂಡೆ ಕಂಗಳಲೆನ್ನ ಮಂಗಳಾತ್ಮನ ಕಂಡೆ
ಕಂಡೆ ಮಂಗಳಾಂಗ ಶ್ರೀ ಗುರುರಂಗನ ಕಂಡೆ ಧ್ರುವ

ಬಾಲ ಲೀಲೆ ತೋರಿದ ನೀಲವರ್ಣನ ಕಂಡೆ
ಪಾಲಗಡಲಲಿಹ್ಯ ಗೋಪಾಲನ ಕಂಡೆ
ಮೂಲರೂಪದಲಿ ಫಲ್ಗುಣಗೊಲಿದನ ಕಂಡೆ
ಕುಲಕೋಟಿ ಬಂಧುವಾದ ಬಳಗನ ಕಂಡೆ ೧

ಕೊಳಲನೂದುವ ಮೂರ್ತಿ ನಳಿನನಾಭವ ಕಂಡೆ
ಥಳಥಳಿಸುವ ಪಾದ ಹೊಳೆವನ ಕಂಡೆ

ಕಳ್ಳ ಮೊಸರ ಬೆಣ್ಣೆ ಮೆಲುವ ಚೆಲುವನ ಕಂಡೆ
ಇಳೆಯೊಳು ಗೋಕುಲದಿ ಸುಳಿದನ ಕಂಡೆ ೨

ಕಿರೀಟ ಕುಂಡಲಕರ್ಣ ಕೌಸ್ತುಭಧರನ ಕಂಡೆ
ಪರಿಪರಿ ಭೂಷಣ ಸರ್ವಾಂಗನ ಕಂಡೆ
ಗರುಡ ವಾಹನ ಸ್ವಾಮಿ ಉರಗಶಯನ ಕಂಡೆ
ಸಿರಿಯ ಲೋಲಲಿಹ ಸರ್ವೋತ್ತಮನ ಕಂಡೆ ೩

ವಿದುರವಂದಿತ ದೇವ ಮದನ ಮೋಹನನ ಕಂಡೆ
ಆದಿ ಅವಿನಾಶ ಶ್ರೀಧರನ ಕಂಡೆ
ಯದುಕುಲೋತ್ತಮ ಮಧುಸೂದನನ ಕಂಡೆ
ಸಾಧು ಹೃದಯ ಪ್ರಾಣ ಶ್ರೀಮಾಧವನ ಕಂಡೆ ೪

ತುರುಗಳ ಕಾಯ್ದ ಶ್ರೀಹರಿ ಗಿರಿಧರನ ಕಂಡೆ
ಮುರಹರನೆನಿಸಿದ ಸುರಾಧೀಶನ ಕಂಡೆ
ಕರಿಯ ವರದಾಯಕ ಹರಿ ದಯಾಳುನ ಕಂಡೆ
ನರಹರಿ ಶ್ರೀನಾರಾಯಣನ ಕಂಡೆ ೫

ದುಷ್ಟಮರ್ದನ ದೂರ ವಿಷ್ಣುದೇವನ ಕಂಡೆ
ಶಿಷ್ಟ ಜನ ಪಾಲಕ ಸೃಷ್ಟೀಶನ ಕಂಡೆ
ದೃಷ್ಟಿಯೊಳು ಸುಳಿದು ದೃಷ್ಟಾಂತಾದವನ ಕಂಡೆ
ಕಷ್ಟ ಪರಿಹರಿವ ಶ್ರೀಕೃಷ್ಣನ ಕಂಡೆ ೬

ಗುರು ಶಿರೋಮಣಿ ತ್ರೈಲೋಕ್ಯನಾಥನ ಕಂಡೆ
ಪರಮಭಕ್ತರ ಸಂಜೀವನ ಕಂಡೆ
ಶರಣ ರಕ್ಷಕ ನಮ್ಮ ಕರುಣ ಸಿಂಧುನ ಕಂಡೆ
ತರಳ ಮಹಿಪತಿ ಪ್ರಾಣಹೊರೆವ ಕಂಡೆ ೭

## ೬೫೯

ಕಂಡೆ ಕಂಡೆ ಕಂಡೆವಯ್ಯ ಪಿಂಡ ಬ್ರಹ್ಮಾಂಡದೊಳು
ಹಿಂಡ ದೈವದೊಡೆಯ ಪ್ರಚಂಡನ ಕಂಡೆ ಧ್ರುವ

ದೀನನಾಥನ ಕಂಡೆ ದೀನೋದ್ಧಾರನ ಕಂಡೆ
ಅನಾಥಜನರ ಪ್ರತಿಪಾಲನ ಕಂಡೆ ೧

ಶರಣ ರಕ್ಷಕನ ಕಂಡೆ ವಾರಿಜಾಕ್ಷನ ಕಂಡೆ
ವರಮುನಿ ಜನರಾ ಪ್ರತ್ಯಕ್ಷನ ಕಂಡೆ ೨

ಭಕ್ತ ಪ್ರಿಯನ ಕಂಡೆ ಮುಕ್ತಿಯೀವನ ಕಂಡೆ
ಪತಿತ ಪಾವನ ಗುರು ಸಂಜೀವನ ಕಂಡೆ ೩

ದೇವದೇವನ ಕಂಡೆ ಕಾವ ಕರುಣನ ಕಂಡೆ
ಮಹಿಪತಿ ತಾರಕ ಗುರು ಭವನಾಶನ ಕಂಡೆ ೪

## ೬೬೦

ಕಂಡೆ ನಾನೊಂದು ಸುವಸ್ತ
ಮಂಡಲದೊಳು ಸದ್ಗುರು ದಯದಲಿ ಸಾಭ್ಯಸ್ತ ಧ್ರುವ

ನೆನವಿನ ಕೊನೆಯಲಿ ಅನುವಾಗಿ ದೋರುತದೆ
ಘನ ದೀಪ್ತಿಯಲಿ ಬೀರುತಿದೆ ಮನದ ಮುಗುಟ ೧

ಪ್ರಣವನ ಮೂಲಾಗ್ರಹಲಿ ಪರಿಪೂರ್ಣತಾನಾಗೆದ
ಘನವೆ ಘನವಾಗ್ತೊಳೆಯುತದೆ ಪ್ರಾಣಪದಕ ೨

ಮಹಿಪತಿ ಬಾಹ್ಯಾಂತ್ರದೊಳು ವಸ್ತು ವಿರಾಜಿಸುತದೆ
ಮಹಿಮರೆ ಬಲ್ಲರೀಸುಖ ನಾಮಾಮೃತದ ಸ್ವಾನುಭವದ ೩

## ೬೬೧

ಕಂಡೆ ನಿಂದಾನಂದೋಬ್ರಹ್ಮನ ಮಂಡಲೇಶನ ಧ್ರುವ

ಪಿಂಡ ಬ್ರಹ್ಮಾಂಡ ತಂಡಕ ಜಡದ
ಖಂಡಿತವಾಗ ಸುಪಂಡಿತರಾತ್ಮನ ೧

ಸನ್ಮಾರ್ಗ ಸದ್ಗತಿ ಸಾಧನ ಸದ್ಗುರು ನಿಧಾನ
ಸದ್ಬ್ರಹ್ಮಾಕರ ಸದ್ವಾಸನೆ ಪೂರಿಸಿ ಸದ್ಗೈಸುವ ಸದ್ಭಾವ ಬೋಕ್ತನ ೨

ಸೂಸುತದೆನ್ನೊಳಗೆ ಖೂನ ವಾಸುದೇವನ ಲೇಸಿನ
ನಿಜಸುಖ ಭಾಸುವ
ಮಹಿಪತಿಗೋಸುಗ ಭಾಸ್ಕರ ಕೋಟಿ ಪ್ರಕಾಶನ ಕಂಡೆ ೩

## ೬೬೨

ಕಂಡೆನು ಕೌತುಕ ಮಂಡಲದೊಳಗೊಂದು ಹೊಯ್ಯಂದ
ಡಂಗುರವ ಮಂಡಿಯ ಮಸಿಯಲಖಂಡಿತವಾಗ್ಯದೆ ಧ್ರುವ

ಖೋಯೆಂದು ಕೂಗುತ ಕಾಯದೊಳಗದೆ
ಮಾಯದ ಮರೆಯಲುಪಾಯ ಮುಚ್ಚಿದ ನೋಡಿ ೧

ಝೀಂ ಝೀಂ ಝೀಂ ಝೀಂ ಝೀಂಕರಿಸುತದೆ
ಕಂಜನಾಭನ ಕರುಣಾನಂದನೋಡಿರ್‍ಯೊ ೨

ಘೇಳೆನಿಸುತದ ತಾಳಮೃದಂಗವು
ಒಳಹೊರಗಿದು ಧಿಮಿಗುಡುತದ ೩

ಅನುಹಾತ ಧ್ವನಿಅನುಭವ ನೋಡಿರೋ
ಅನುದಿನ ಸಾಧಿಸಿ ಘನ ಬೆರದಾಡಿರೊ ೪

ಆನಂದೊಬ್ರಹ್ಮದ ಆಟವಿದುನೋಡಿ
ಏನೆಂದ್ಹೇಳಲಿ ಸ್ವಾನುಭವದ ಸುಖ ೫

ತುಂಬಿತುಳುಕುತದೆ ಅಂಬುಜಾಕ್ಷನ ಮಹಿಮೆ
ಕುಂಭಿನಿಯೊಳು ನಿಜ ಗಂಭಗುರುತ ನೋಡಿ ೬

ಸಾಧಿಸಿ ನೋಡಿರೊ ಶ್ರೀ ಸದ್ಗುರು ಶ್ರೀಪಾದ
ಗಾದಿಯ ಮಾತಲ್ಲ ಭೇದಿಸಿ ನೋಡದು ೭

ಶುಕಾದಿ ಮುನಿಗಳ ಸುಖಾಶ್ರಯವಿದು
ಏಕಾಕ್ಷರ ಬ್ರಹ್ಮ ಏಕೋಚಿತ್ತದಿ ೮

ಮೊತ್ತರಾಗಿ ತನ್ನ ನೆತ್ತಿಯೊಳಗಿದೆ
ಉತ್ತಮರ ಸುತ್ತ ಮುತ್ತ ಸೂಸುತದ ೯

ಗುರು ಕೃಪೆಯಿಲ್ಲದೆ ಗುರುತವಾಗದಿದು
ಬರೆ ಮಾತಿನ ಮಾಲೆಗೆ ಸೆರಗ ಸಿಲುಕದಿದು ೧೦

ಗುರುತವಿಟ್ಟು ಗುರುವಿನ ಮಹಿಮೆಯ
ತರಳ ಮಹಿಪತಿ ನಿನ್ನೊಳು ನೋಡೆಂದು ೧೧

## ೬೬೩

ಕಂಡೆವಯ್ಯ ನಿಮ್ಮ ಗುರುಪುಣ್ಯ ಚರಣಮಹಿಮೆ
ಮಂಡಲದೊಳು ಗುರುಕೃಪೆಯಿಂದ ಧ್ರುವ

ಕಣ್ಣಮುಚ್ಚಿದರೆ ತಾ ಕಣ್ಣನೊಳಗದೆ
ಕಣ್ದೆರದರೆ ಕಾಣಿಸುತದೆ
ಸಣ್ಣ ದೊಡ್ಡದರೊಳು ತುಂಬಿತುಳುಕುತದೆ
ಬಣ್ಣ ಬಣ್ಣದಲೆ ಭಾಸುತಲ್ಯದೆ ೧

ಆಲಿಸಿಕೇಳಲು ಹೇಳಗುಡುತಲ್ಯದೆ
ತಾಳಮೃದಂಗ ಭೇರಿ ಭೋರಿಡುತ
ಒಳಹೊರಗೆ ಧಿಮಿಧಿಮಿಗೊಡುತಲ್ಯದೆ
ಹೇಳಲಿನ್ನೇನು ಕೌತುಕವ ೨

ಸುಳಿ ಸುಳಿದಾಡುತಹೊಳೆಯುತ ಎನ್ನೊಳಗೆ
ಥಳಥಳಿಸುವ ತೇಜ: ಪುಂಜವಿದು
ಮಳೆಮಿಂಚಿನ ಪರಿ ಕಳೆದೋರುತಲ್ಯದೆ
ಝಳಝಳಿಸುತ ಎನ್ನ ಮನದೊಳಗೆ ೩

ತುತ್ತಾಯಿತಾ ಮಾಡಿನಿತ್ಯ ಸಲುಹುತದೆ
ಎತ್ತಹೋದರೆ ತನ್ನಹತ್ತಿಲ್ಯದೆ
ದತ್ತವುಳ್ಳವಗೆ ತಾ ಪ್ರತ್ಯಕ್ಷವಾಗ್ಯದೆ
ಮೊತ್ತವಾಗ್ಯದೆ ತನ್ನ ನೆತ್ತಿಯೊಳಗೆ ೪

ಧನ್ಯಗೈಸಿತು ಎನ್ನ ಪ್ರಾಣ ಜೀವನವಿದು
ಚೆನ್ನಾಗಿ ಪೂರ್ಣ ಗುರುಕೃಪೆಯಿಂದ
ಕಣ್ಣಾರೆ ಕಂಡೆ ಭಾನು ಕೋಟಿಪ್ರಕಾಶ
ನಿಮ್ಮ ಧನ್ಯಧನ್ಯವಾದ ಮಹಿಪತಿಯು ೫

## ೬೬೪

ಕಂಡೆವು ಗುರುದಿವ್ಯ ಶ್ರೀ ಸುಚರಣ
ಮಂಡಲದೊಳಾಯಿತು ಸುಭೂಷಣ ಧ್ರುವ

ಇದೆ ನಿಜ ಪುಣ್ಯ ಪೂರ್ವಾರ್ಜಿತ
ಇದರಿಟ್ಟು ಬಂತೆನಗಾಯಿತು
ಒದಗಿ ಕೈಗೂಡಿತು ತ್ವರಿತ
ಹೃದಯಲೆನ್ನಾಯಿತು ಉದಿತ ೧

ಕಣ್ಣಾರೆ ಕಂಡೆವು ನಿಜ ಧನ
ಜನುಮವೆನ್ನಾಯಿತು ಪಾವನ
ಎನ್ನೊಳು ದೋರಿತಾನಂದ ಘನ
ಧನ್ಯ ಧನ್ಯವಾಯಿತು ಜೀವನ ೨

ಲೇಸು ಲೇಸಾಯಿತಯ್ಯ ನೋಡಿ
ಭಾವಿಸಿದ ಸದ್ಗುರು ದಯಮಾಡಿ
ವಾಸನೆ ಪೂರಿಸಿತು ಇಲ್ಲೆ ನೋಡಿ
ದಾಸಮಹಿಪತಿ ನಿಜಗೂಡಿ ೩

## ೬೬೫

ತಾನೆ ತಾನಾದನಮ್ಮಾ ಎನ್ನೊಳು ಘನಬ್ರಹ್ಮ ಧ್ರುವ

ಕಣ್ಣಿಲೆ ನೋಡಲಿಕ್ಕೆ ಕಣ್ಣಿನೊಳಾದನಮ್ಮ
ಕಣ್ಣಿಗೆ ಕಣ್ಣಾಗಿ ಪೂರ್ಣ ಕಾಣಿಸಿದಾನಂದೋಬ್ರಹ್ಮ
ಅಣುರೇಣುದೊಳು ವ್ಯಾಪಿಸಿ ಜನ ಮನ ದೊಳು ತುಂಬಿಹ
ತನುಮನದೊಳು ತಾನೆತಾನಮ್ಮ ೧

ಎತ್ತ ನೋಡಿದತ್ತ ಸುತ್ತ ಸೂಸುವನಮ್ಮ
ನೆತ್ತಿ ಒಳಗೆ ಪೂರ್ಣ ಮೊತ್ತವಾದ ಪರಬ್ರಹ್ಮ
ಅತ್ತಿತ್ತಗಲದೆ ಎನ್ನ ಹತ್ತಿಲಿಹ್ಯ ಅನುದಿನ ಸಂತತ
ಸದ್ಗುರು ಪೂರ್ಣ ಅಂತರಾತ್ಮದೊಳಗಿಹನಮ್ಮ ೨

ನಾನು ನಾನೆಂಬುದಿದು ಇಲ್ಲದಂತಾಯಿತು ನಮ್ಮ
ತಾನೆ ತಾನಾದ ನಿಜ ಓಮಿತ್ಯೇಕಾಕ್ಷರ ಬ್ರಹ್ಮ
ಚೆನ್ನಾಗಿ ಮಹಿಪತಿಗೆ ಸನ್ಮತಸುಖದೋರಿತು
ಉನ್ಮನವಾಗ್ಯೆನ್ನೊಳಗೆ ಘನಸುಖ ಹೊಳೆಯಿತು ಸಂಭ್ರಮ ೩

## ೬೬೬

ತಾನೆನೆ ತಾನಾದೆನ್ನ ಸ್ವಾಮಿ
ಭಾನುಕೋಟಿ ಅಂತರ್ಯಾಮಿ ಧ್ರುವ

ಕಾಣಬರುತಾದೆ ನೋಡಿ
ಜ್ಞಾನವಂದಭ್ಯಾಸ ಮಾಡಿ
ಭಾನು ಭವದಲಿ ಕೂಡಿ
ನಾನು ನೀನೆಂಬುದೀಡ್ಯಾಡಿ ೧

ತಿರುಗಿ ನೋಡು ದೋರುತಾನೆ
ಅರುವಿನೊಳು ನಿಂತಾನೆ
ಸಾರಸುಖ ಬೀರುತಾನೆ
ಕೋರಿ ತಾರ್ಕಣ್ಯಾಗ್ಯಾನೆ ೨

ಧ್ಯಾನ ಮೌನಾಗ್ಯಾನೆ ತಾನೆ
ಜ್ಞಾನಗುರು ದೋರುತಾನೆ
ದೀನ ಮಹಿಪತಿಗೆ ತಾನೆ
ಖೂನ ಪರಿಪೂರ್ಣಾಗ್ಯಾನೆ ೩

## ೬೬೭

ಧನ್ಯ ಧನ್ಯವಾಯಿತು ಎನ್ನ ಜನುಮ
ತನ್ನಿಂದ ತಾನೊಲಿದ ಘನ ಮಹಿಮ
ಎನ್ನೊಳಗೆ ದೋರಿತಾನಂದೊ ಬ್ರಹ್ಮ
ಕಣ್ಣಾರೆ ಕಂಡೆನು ಸದ್ಗುರು ಧರ್ಮ ೧

ಬ್ರಹ್ಮಸುಖ ಹೊಳೆಯಿತು ಸಾಧುಸಂಗ
ಚುಮು ಚುಮು ಕೊಡುತಿದೆಕೊ ಸರ್ವಾಂಗ
ಧಿಮಿ ಧಿಮಿಗುಡುತ ತಾಲ ಮೃದಂಗ
ಸಮಾರಂಭವಾಯಿತು ಬಾಹ್ಯಂತರಂಗ ೨

ಎದುರಿಟ್ಟು ಬಂತು ಪುಣ್ಯ ಪೂರ್ವಾರ್ಜಿತ
ಒದಗಿ ಕೈಗೂಡಿತೆನಗೆ ತ್ವರಿತ
ಸಾಧಿಸಿತು ಮಹಿಪತಿಯ ಮನೋರಥ
ಸದ್ಗುರು ಕೃಪೆಯಾಯಿತು ತಾ ಸದೋದಿತ ೩

## ೬೬೮

ಧನ್ಯವಾಯಿತು ಜೀವವಿಂದು
ಚೆನ್ನಾಗಿ ಪೂರ್ಣ ದಿವಸಕೆ ನಡೆದು ನಾ ಬಂದು ಧ್ರುವ

ಹೇಳಲಾಗದು ಈ ಹರುಷ ಇಳಿಯೊಳು ತಾ
ತೋರುತಿಹುದು ಸಂತೋಷ
ಮಳಿಮಿಂಚಿನ ಪ್ರಕಾಶ ಹೊಳೆಯುತಿಹುದು
ಮನದೊಳತಿವುಲ್ಹಾಸ ೧

ಕಣ್ಣಾರೆ ಕಂಡೆವು ನಿಧಾನ ಭಿನ್ನವಿಲ್ಲದೆ ಭಾಸ್ಕರ ಗುರುಚರಣ
ಆನಂದೋ ಘನಸ್ಫುರಣ ಮನಬೆರೆದು
ಮುಕ್ತವಾಯಿತು ಜೀವನ ೨

ಭಾವಿಸಿ ಭಕ್ತರಿಯ ನೋಡಿ ಅವಿನಾಶನ
ಪುಣ್ಯಚರಣ ಸೇವೆಮಾಡಿ
ಜೀವಭಾವನೆ ಈಡ್ಯಾಡಿ ಪಾವನವಾದ ಮಹಿಪತಿ
ಗುರು ಪಾದ ಕೂಡಿ ೩

## ೬೬೯

ಧನ್ಯ ಸತ್ಸಂಗ ಎನ್ನೊಳು ಹೊಳೆಯಿತು ಘನಲಿಂಗ ಧ್ರುವ

ನೋಡಿದವನ ನೋಟ ಮಾಡಿತೆನ್ನೊಳು ಜೀವ ಶಿವಕೂಟ
ನೀಡಿದಾಭಯದೂಟ ಗೂಢಗುರುತವಾಯಿತು ನೀಟ ೧

ಹೇಳಿದವನ ಮಾತು ಹೊಳೆಯುವ ಸುಪ್ವಾಣಿಯ ಮುತ್ತು
ತಿಳಿಯಿತೆನ್ನೊಳು ವಸ್ತು ಅಳಿಯಿತು ಜನ್ಮ ಮೃತ್ಯು ೨

ಸತ್ಸಂಗವ ಕೂಡಿ ಪತಿತಪಾವನವಾದನು ನೋಡಿ
ಕ್ಷಿತಿಯೊಳು ನಿಜಗೂಡಿ ಗತಿಪಡೆದನು ಮಹಿಪತಿ ನೋಡಿ ೩

## ೬೭೦

ನಮಗೊಬ್ಬಾನೆ ತಾ ಜೀವಜೀವದ ಗೆಳೆಯ ಧ್ರುವ

ಸುತ್ತಿ ಸೂಸ್ಯಾಡುತ್ತಾನೆ ನೆತ್ತಿಯೊಳಗೆ ತುಂಬ್ಯಾನೆ
ತುತ್ತುಮಾಡಿ ಉಣಿಸುತ್ತಾನೆ ಹತ್ತಿಲೆ ತಾ ಹಾನೆ ೧

ಹೊಟ್ಟೆಲೆನ್ನ ಹಿಡಿದಾನೆ ಘಟ್ಯಾಗಿ ರಕ್ಷಿಸುತಾನೆ
ದೃಷ್ಟಿಸಿ ನೋಡುತ್ತಾನೆ ಗುಟ್ಟಿನೊಳ್ಹಾನೆ ೨

ತಾನೆ ಸೋತು ಬರುತ್ತಾನೆ ಎನಗುಳ್ಳ ಸದ್ಗುರು ನಾಥ್ಹಾನೆ
ಕನಗರಸಿದಾಗೊಮ್ಹಾನೆ ಮನದೊಳು ನಿಂದ್ಹಾನೆ ೩

ಮಾಯದ ಸುಖ ಮರಿಸ್ಯಾನೆ ತಾಯಿ ತಂದೆ ತಾನಗ್ಯಾನೆ
ಸಾಹ್ಯ ಬಲು ಮಾಡುತ್ತಾನೆ ಭವಭಯ ಬಿಡಿಸ್ಯಾನೆ ೪

ಮನ್ನಿಸಿ ದಯ ಬೀರುತ್ತಾನೆ ಧನ್ಯ ಪ್ರಾಣಗೈಸುತ್ತಾನೆ
ಚೆಣ್ಣ ಮಹಿಪತಿಯ ಗುರು ತಾನೆ ಕಣ್ಣಿನೊಳ್ಹಾನೆ ೫

## ೬೭೧

ನೋಡಿ ನಿಮ್ಮೊಳು ನಿಜಾನಂದಬೋಧ
ಕೂಡಿ ಕರುಣಾಸಿಂಧು ಶ್ರೀಗುರುಪಾದ ಧ್ರುವ

ಇಡಾ ಪಿಂಗಳ ಮಧ್ಯ ನೋಡಿ ಈಗ
ನಾಡಿ ಸುಷಮ್ನವಿಡಿದು ಕೂಡಿ ಬ್ಯಾಗ
ನೋಡಬಲ್ಲಿದೆ ಬ್ರಹ್ಮಾನಂದ ಭೋಗ
ಗೂಢವಿದ್ಯವಿದು ತಾ ರಾಜಯೋಗ
ಒಡನೆ ತಿಳಿಯುವದಲ್ಲ ಷಡಚಕ್ರ ಭೇದವಲ್ಲ
ಬಡವರಿಗಳವಲ್ಲ ಗೂಢಿನ ಸೊಲ್ಲ ೧

ಪಿಡಿದು ಮನಮಾಡಿ ದೃಢನಿಶ್ಚಯ
ಬಿಡದೆ ಭೇದಿಸಿನೋಡಿ ಸುಜ್ಞಾನೋದಯ
ಇಡದು ತುಂಬ್ಯದೆ ವಸ್ತು ಜ್ಯೋತಿರ್ಮಯ
ಪಡೆದುಕೊಳ್ಳಿರೊ ಗುರು ಕರುಣ ದಯ
ಮನ ಉನ್ಮನ ಮಾಡಿ ಘನಸುಖದೊಳು ಕೂಡಿ
ಅನಿಮಿಷದಲಿ ನೋಡಿ ಅನುದಿನ ನಲಿದಾಡಿ ೨

ಮೂರುಗುಣರಹಿತ ಮೂಲರೂಪ
ತೋರುತಿಹ್ಯದು ನಿಜ ನಿರ್ವಿಕಲ್ಪ
ತರಳ ಮಹಿಪತಿ ಪ್ರಾಣ ಪಾಲಿಪ
ಹೊರೆದು ಸಲಹುವ ಗುರುಕುಲದೀಪ
ಭಾವಿಕರಿಗೆ ಜೀವ ಕಾವ ಕರುಣದೇವ
ಸರ್ವರೊಳಗೀವ್ವ ಶ್ರೀ ವಾಸುದೇವ ೩

## ೬೭೨

ನೋಡಿ ನೋಡಿ ನೋಡುದರೊಳಗೆ
ನೋಡಿದ ನೋಟ ಸದ್ಘನವಾಗುವ್ಹಾಂಗ ಧ್ರುವ

ಮನದಿಂದಲಿ ಮನನೋಡುವ ಯೋಗ
ಘನಸುಖ ತೋರುವದಿದೆ ಬ್ರಹ್ಮಭೋಗ ೧

ಕಣ್ಣಿನಿಂದಲಿ ಕಣ್ಣುದೆರುವ್ಹಾಂಗ ಮಾಡಿ
ಚನ್ನಾಗಿ ಉದಯವಾಗುದು ಘನ ಮೂಡಿ. ೨

ಭಾವ ಬಲಿದು ನೋಡುವುದು ಬಲುಚೆಂದ
ಆವಾಗ ಮಹಿಪತಿಗಿದೆ ಬ್ರಹ್ಮಾನಂದ ೩

## ೬೭೩

ನೋಡಿರೋ ನೋಡಿರೋ ಸ್ವಾಮಿ ಶ್ರೀಪಾದ
ಗೂಢಗುರುತವಾಗ್ಯದ ನಿಜಬೋಧ ಧ್ರುವ

ಕಣ್ಣಿನೊಳಗದ ಕಾಣುಗುಡುತಿದೆ
ಕಣ್ಣೆ ಕಣ್ಣಿಗೆ ಕಾಣಿಸುತಿದೆ ೧

ಝುಗಝುಗಿಸುತಿದೆ ಥಳಥಳಿಸುತಿದೆ
ಬಗೆ ಬಗೆ ಭಾಸುತ ಹೊಳೆಯುತಲಿದೆ ೨

ಕೇಳಬರುತದೆ ಹೇಳಗುಡುತದೆ
ತಾಳ ಮೃದಂಗವು ಭೋರಿಡುತದೆ ೩

ಏನೆಂದ್ಹೇಳಲಿ ಸ್ವಾನಂದ ಲೀಲೆ
ಸ್ವಾನುಭವದಸುಖ ಆಲಿಸಿ ಕೇಳಿ ೪

ಮಾಯಾಕಾರಗಿದು ಕೈಯಲಿಗೂಡದು
ಮಹಿಪತಿ ಸ್ವಾಮಿದಯಕೆ ಒದಗುವದು ೫

## ೬೭೪

ನೋಡಿ ಶ್ರೀ ಹರಿಪೂಜೆ ಮಾಡುದು
ಬಿಡಿ ಮನಕೃತ ವಾಜಿ ಧ್ರುವ

ಮಂಗಳಕರಸುಖ
ಕಂಗಳಗಿದಿರಿಡುತದನೇಕ
ಮುಂಸಗುಡಿಯಲಿ ಮೂಡಿ
ರಂಗದೋರುವ ಘನಕೌತುಕ ೧

ತಾಳ ಮೃದಂಗ ಘನ ಭೇರಿ
ಫಳಗುಡುತದೆ ಪರೋಪರಿ
ತಿಳಿದವನಧಿಕಾರಿ
ಕೇಳಲ್ಹೋಗುದು ಭವಭಯ ಹಾರಿ ೨

ಹೇಳಲೆನ್ನಳವಲ್ಲ
ಹೊಳೆವುತಿಹುದು ಮೂಜಗವೆಲ್ಲ
ಕೇಳಿ ಸವಿಯ ಸೊಲ್ಲ
ತಿಳಿದ ಮಹಿಮ ತಾನೆ ಬಲ್ಲ ೩

ಅಜಪ ಸುಜಪ ಮಂತ್ರ
ರಾಜಿಸುತಿಹುದು ಬಾಹ್ಯಾಂತ್ರ
ತ್ರಿಜಗ ಮಾಡುವ ಪವಿತ್ರ
ಸುಜನ ನೋಡುವ ಸುಚರಿತ್ರ ೪

ಸ್ವಹಿತ ಸುಖದ ಸಾರ
ಶ್ರೀಹರಿಪೂಜೆ ನಿರಂತರ
ಮಹಿಪತಿ ಮನೋಹರ
ಸಾಹ್ಯ ಸಕಲಕಿದೆ ಸಹಕಾರ ೫

## ೬೭೫

ಪರಮೇಶ್ವರ ಪೂರ್ಣ ತುಂಬ್ಯಾನ ಪರಾಮರಿಸಿ ನಿಮ್ಮೊಳಗೆ
ಪರದೆ ಇಲ್ಲದೆ ಪರವಸ್ತುದೋರುವ ಕರುಣಿಸಿ ನಿಮಿಷದೊಳಗೆ
ಕರವಿಡಿದು ಪಾರನೆ ದಾಟಿಸುತಿಹ ಸ್ವಾಮಿ
ಸದ್ಗುರು ಜಗದೊಳಗೆ
ಎರಡಿಲ್ಲದೆ ಗುರುಚರಣಕ ಮನಬೆರೆದನುಭವಿಸುವದಾವಾಗೆ
ತ್ರಾಹಿ ತ್ರಾಹಿ ೧

ನೋಡದೆ ತನ್ನೊಳು ಗೂಢವಾಗಿಹ್ಯ
ನಿಜಮಾಡುವದೆಲ್ಲ ಡಾಂಭಿಕ
ಮೋಡದ ಮುಸುಕಿದು ಮಾಡಿದ ಮಾಟವು
ಮಾಡದು ತಾ ನಿಜಸುಖ
ಕೂಡಲು ಪುಣ್ಯೋದಗ್ಯಾಗಲು ಗುರುಕೃಪೆ ನೋಡುದು ಕೌತುಕ
ನೀಡುವ ನಿಜ ಘನಕಾಟದನುಭವ
ಗೂಡಿನೊಳನೇದಾ ತ್ರಾಹಿ ತ್ರಾಹಿ ೨

ಪೂಜಿಸಬೇಕು ಮೂಜಗದೊಡಿಯನ ಮನ
ರಾಜಿಸುತಿಹ್ಯ ಶ್ರೀಪಾದ
ವಾಜಿ ವಂದನೆಮಾಡಿ ಅನುದಿನ ತಾ ಸೇವಿಸಬೇಕು ಸುಬೋಧ
ಮಾಜದೆ ಗುರುಚರಣಕ್ಕೆ ತನುಮನಧನ ಭಜಿಸಬೇಕು ಸರ್ವದಾ
ನಿಜ ಘನದೋರಿತು ಮಹಿಪತಿಗಿದು ತಾ
ರಾಜಯೋಗಪ್ರಸಾದ ತ್ರಾಹಿ ತ್ರಾಹಿ ೩

## ೬೭೬

ಪೂಜಿಮಾಡುವ ಬನ್ನಿ ರಾಜತೇಜೋನಿಧಿಯ
ರಾಜಾಧಿರಾಜ ಮಹಾರಾಜ ಗುರುಮೂರ್ತಿಯ ಧ್ರುವ

ಮನವೆ ಸುಮನಮಾಡಿ ಘನಗುರು ಪಾದಲಿಡಿ
ಅನುಭವದಿಂದ ನೋಡಿ ಅನುದಿನವೆ ಕೊಂಡಾಡಿ ೧

ಷೋಡಶೋಪಚಾರ ಮಾಡಿ ದೃಢ ವಿಚಾರ
ನೋಡಿ ಮನೋಹರ ಒಡಿಯನೆ ಸಹಕಾರ ೨

ಕಣ್ಣಿನೊಳಿಟ್ಟು ಖೂನ ಪುಣ್ಯನೋಡಿ ನಿಧಾನ
ಚೆಣ್ಣಮಹಿಪತಿಪ್ರಾಣ ಧನ್ಯಗೈಸುವ ಸಾಧನ ೩

## ೬೭೭

ಬೆಳಗಿನೊಳು ಬೆಳಗಾಯಿತು ನೋಡಿ ಥಳಥಳಿಸುತ ಮನದೊಳಗೆ
ಹೊಳೆಯುತ ಒಳಹೊರಗೇಕೋಮಯದಲಿ ಝಳಿ
ಝಳಿಸುತಿಹದು ಜಗದೊಳಗೆ ಧ್ರುವ

ಬೆಳಗಾಯಿತು ಎನ್ನೊಳಗೆ
ಸುಳಿವು ದೋರಿದ ಸದ್ಗುರು ಕೃಪೆಯ ಹೇಳಲಿನ್ನೇನದರ ಖೂನ
ತಿಳಿದೇನೆಂದರೆ ಎಳೆಯು ಸಿಲುಕದು ಬಲು ಸೂಕ್ಷ್ಮ ಸುಜ್ಞಾನ
ಹೇಳಿ ಕಿತ್ಯಾಡುವ ಮರುಳರಿಗೆ ತಿಳಿಯದಿದರನುಸಂಧಾನ
ಕಳೆಯದ ಕಲ್ಪನೆ ಅನುಮಾನಿಗಳಿಗೆ ತಿಳಿಯುವುದೆ ಸದ್ಗತಿ ಸಾಧನ ೧

ಬೆಳಗಿ ಬೆಳಗು ಬೆರೆದವನೆ ತಾ ಕುಲಕೋಟಿಗಳು ಧನ್ಯ
ಮಳೆಮಿಂಚಿನ ಕಳೆಕಾಂತಿಗಳಿಡುತದೋರಿದ ಸದ್ಗುರು ಪುಣ್ಯ
ಹೇಳಿಹ ಗುಹ್ಯ ವಾಕ್ಯದನುಭವ ಬಂತೆನ್ನೊಳು
ತಾರ್ಕಣ್ಯ ಬೆಳಗು ಬೈಗಿಲ್ಲದ
ಬೆಳಗಿನ ಪ್ರಭೆ ತಿಳಿದವನೆ ಮೂಲೋಕದೊಳಗೆ ಮಾನ್ಯ ೨

ಬೆಳಗಿನೊಳು ಬೆರಗಾದನು ಮಹಿಪತಿ ಅತಿ ಆಶ್ಚರ್ಯವ ನೋಡಿ
ತೊಳಲಿ ಬಳಲುವ ನಿದ್ರೆಯಗಳೆದನು ತಾ ಈ ಡ್ಯಾಡಿ
ಬೆಳಗೇ ಬೆಳಗಾಯಿತು ಘನ ಗುರುದಯ ಮನದೊಳು
ನಿಜ ಒಡಮೂಡಿ
ಬೀಳುವ ತಿಮಿರಾಂಧವ ಭವ ಪಾಶವ ಕಳೆದನು ಸದ್ಗುರು
ಪಾದವ ಕೂಡಿ ೩

## ೬೭೮

ಭಾಸುತ ಬಂದ ನೋಡಿ ಭಾಸ್ಕರಕೋಟಿ ತೇಜ
ಲೇಸು ಲೇಸಾಯಿತೆನ್ನ ಮನದೊಳಗೆ ಧ್ರುವ

ಹೊಳೆಯುತ ಸುಳಿಯುತ ಥಳಥಳಗುಡುತ
ಒಲಿಯುತ ಬಂದ ನೋಡಿ ಎನ್ನೊಳಗೆ ೧

ಕರುಣ ಕವಚವ ತೊಟ್ಟು ವರಮುನಿಗಳ ಪ್ರಾಣ
ಹರುಷ ಬೀರುತ ಬಂದ ತ್ವರಿತಿಲ್ಲಿಗೆ ೨

ದೀನ ದಯಾಳು ಎನ್ನ ಅನಾಥ ಬಂಧು ಸ್ವಾಮಿ
ಸನಾಥ ಮಾಡಲಿ ಬಂದ ಮಹಿಪತಿಗೆ ೩

## ೬೭೯

ಭಾಸ್ಕರಗುರುದಯ ಭಾಸುತದೆ ವಿಜಯ ಧ್ರುವ

ಕಂಗಳಿಗೆದುರಿಟ್ಟಾನಂದ ಮಂಗಳಕರದೋರುತಲ್ಯದೆ ಚೆಂದ
ಸಂಗ ತೋರಿತು ನಿಜವಂದ ಹಿಂಗಿಸಿ ಭವಬಂಧ ೧

ಮನಸಿಗೆ ತೋರಿತು ಊರ್ಜಿತ ನೆನೆವಿಗೆ ಕೈಗೊಟ್ಟಿತು ಆಯತ
ಜನವನದೊಳುಗುದಿತಾ ಘನವೆ ಸಾಕ್ಷಾತ ೨

ಸೋಹ್ಯದೋರಿ ಸಮರಸ ಸಾಹ್ಯಮಾಡಿದ ಸರ್ವೇಶ
ಮಹಿಪತಿಗಿದೆ ಸಂತೋಷ ಇಹಪರ ಉಲ್ಲಾಸ ೩

## ೬೮೦

ಮುಖ ಶುದ್ಧಿ ಇದೇವೆ ನೋಡಿ ಏಕೋ
ವಿಷ್ಣುವೆಂಬುದು ಕೊಂಡಾಡಿ ಧ್ರುವ

ಜಿಹ್ವೆಗೊಂಡಿತು ಸುಸ್ವಾದ ದಿವ್ಯನಾಮ ಸುರಸ್ವಾದ
ಭವನಾಶಗೈಸಿತು ಗುರುಬೋಧ ಸವಿದೋರಿತು ಗುರುಪ್ರಸಾದ ೧

ಸ್ವಾನುಭವದ ಸವಿಸುಖ ಏನೆಂದ್ಹೇಳಲಿ ಕೌತುಕ
ಮನಕಾಯಿತು ಹರುಷ ಅನೇಕ ಧನ್ಯ ಧನ್ಯಗೈಯಿತು ಜಿಹ್ವೆಮುಖ ೨

ಮುಖ ಶುದ್ಧಿ ಮಹಿಪತಿಗಿದೆ ನೋಡಿ ಏಕೋಚಿತ್ತ
ಸುಸ್ಮರಣೆಯ ಮಾಡಿ
ಸುಖದೋರಿತು ಘನಬೆರೆದಾಡಿ ಅಖಿಳದೊಳಗಿದೆ ನಿತ್ಯ ಮಾಡಿ ೩

## ೬೮೧

ಲೇಸು ಲೇಸಾಯಿತೆನ್ನ ಜನುಮ ನೋಡಿ
ವಾಸುದೇವನೆ ಬಂದು ಕೈಗೂಡಿ ಧ್ರುವ

ಎನ್ನ ಮಾನಾಭಿಮಾನ ಆದ ಹರಿಯೆ
ಇನ್ನು ಇಂಥ ಪುಣ್ಯಕ ನೋಡಿ ಸರಿಯೆ
ಧನ್ಯಗೈಸಿದುತ್ತೀರ್ಣಾಗಲರಿಯೆ
ಇನ್ನೊಬ್ಬರಿಗೇನು ಮುಚ್ಚುಮರಿಯೆ ೧

ಕೋಟಿ ಜನ್ಮದಲಿ ಮಾಡಿದ ಸುಪುಣ್ಯ
ನಾಟಿ ಬಂತೆನ್ನೊಳಗಸು ತಾರ್ಕಣ್ಯ
ನೀಟದೋರಿತು ಘನ ಸುಚೈತನ್ಯ
ನೋಡ ನೆಲೆಗೊಂಡಾಯಿತು ಧನ್ಯ ೨

ತಾನೆ ತಾನಾದೆನ್ನೊಳು ಬಂದು ನೋಡಿ
ಭಾನುಕೋಟಿಪ್ರಕಾಶ ದಯಮಾಡಿ
ದೀನ ಮಹಿಪತಿಗೆ ಸ್ವಸುಖ ನೀಡಿ
ಮನೋಹರ ಮಾಡಿದ ಮನಗೂಡಿ ೩

## ೬೮೨

ವಸ್ತು ಕಂಡೆನು ಒಂದು ಕರ್ತೃ ಸದ್ಗುರುವಿನ ಕೃಪೆಯಿಂದ ಧ್ರುವ

ತೇಜಃಪುಂಜದ ರೂಪ ಮೂಜಗದೊಳಗಿದು ಅಪರೂಪ
ನಿಜ ನಿರ್ವಿಕಲ್ಪ ಸುಜನರ ಹೃದಯಕ ಸದ್ಘನದೀಪ ೧

ರೂಪಕ ನೆಲೆಇಲ್ಲ ವ್ಯಾಪಕವಿದು ಜಗದೊಳಗೆಲ್ಲ
ಗುಪಿತಜ್ಞಾನಿಯು ಬಲ್ಲ ಜಪತಪಕಿದು ಸಿಲ್ಕುವದಲ್ಲ ೨

ಜ್ಞಾನಕ ಸಾಹೀತ ಮುನಿಜನ ಹೃದಯದಿ ಸದೋದಿತ
ಧ್ಯಾನಕೆ ಆಯಿತು ಮನಕಾಮನವಿದು ಪೂರಿತ ೩

ಮೂರಕೆ ವಿರಹಿತ ಮೂರುಲೋಕವು ವಂದಿತ
ಪರಮ ಸಾಯೋಜ್ಯತ ತಾರಕವಸ್ತು ಸಾಕ್ಷಾತ ೪

ಬೈಲಿಗೆ ನಿರ್ಬೈಲ ಭಾವಿಕ ಬಲ್ಲನು ಇದರ್ಹೊಯಿಲ
ಮಹಿಪತಿಗನುಕೂಲ ಜೀವನ್ಮುಕ್ತಿಗೆ ಇದು ಮೂಲ ೫

## ೬೮೩

ವಿಶ್ವಾತ್ಮ ಪರಿಪೂರ್ಣ ವಿಶ್ವವ್ಯಾಪಕ ನೀನೆ
ವಿಶ್ವವಂದಿತ ವಿಶ್ವನಾಥ ನೀನೆ ಧ್ರುವ

ವಿಶ್ವಾತ್ಮದಲ್ಯಾಡುವ ವಿಶ್ವಸ್ವರೂಪವು ನೀನೆ
ವಿಶ್ವ ನಿರ್ಮಿತ ವಿಶ್ವಪಾಲ ನೀನೆ
ವಿಶ್ವವುದ್ಧರಿಸುವ ವಿಶ್ವಪಾವನ್ನನೆ
ವಿಶ್ವಲಿಹ ವಿಶ್ವೇಶ್ವರ ನೀನೆ ೧

ವಿಶ್ವತೋ ಚಕ್ಷು ನೀ ವಿಶ್ವತೋ ಮುಖ ನೀನೆ
ವಿಶ್ವತೋ ಬಹು ಸಾಕ್ಷಾತ್ ನೀನೆ
ವಿಶ್ವಾಂತ್ರ ಸೂತ್ರನೆ ವಿಶ್ವಂಭರನು ನೀನೆ
ವಿಶ್ವರಹಿತ ವಿರಾಜಿತನು ನೀನೆ ೨

ವಿಶ್ವಾಂತರಾತ್ಮ ಭಾಸ್ಕರ ಕೋಟಿತೇಜನೆ
ವಿಶ್ವಾನಂದ ಘನಮಹಿಮ ನೀನೆ
ವಿಶ್ವಾತ್ಮ ಹಂಸ ಮಹಿಪತಿ ಗುರುನಾಥನೆ
ವಿಶ್ವಾಸಲೋಲ ವಿಶ್ವೇಶ ನೀನೆ ೩

## ೬೮೪

ಶ್ರೀಗುರು ಶ್ರೀಪಾದದ ಸಿರಿಸುಖವಿದು ಸಾರಿ
ಸವಿಲೀಲೆ ದೋರುತಿದೆ
ಸುಗಮ ಸುಪಥ ಸದ್ಗುರು ದಯಕರುಣವು
ಬಗೆಬಗೆನುಭವ ಬೀರುತಿದೆ ಧ್ರುವ

ಎಳೆಬಿಸಿಲಿನ ಕಳೆ ತಳತಂದಿಹ ಘನ ತುಂಬಿ ತುಳುಕ್ಯಾಡುತಿದೆ
ಸುಳಿಸುಳಿದಾಡುವ ಹೊಳೆಯುತ ಕಳೆಮೊಳೆ
ಝಳಝಳನೆ ಥಳಗುಡುತಿದೆ

ಭಳಭಳ ಭಾಸುವ ಬೆಳಗಿನ ಬಳಗಿದು ಒಳಹೊರಗೆ
ಬಲು ಸೂಸುತಿದೆ
ಹೇಳಲಿನ್ನೇನದ ತಿಳಿಯಲಗಾಧವು ತನುಮನಕ್ಹರುಷಗಡುತಿದೆ ೧

ಸುರಿಸುರಿದಾಡುವ ಸಾರಸವಿಯ ಸುಧಾರಸ ಭೋರ್ಗರೆಯುತಿದೆ
ಇರುಳ್ಹಗಲೆನದ್ಯಾವಾಗನುದಿನ ಸದ್ಘನಸುರಿಮಳೆ ಧಾರಿಡುತಿದೆ
ಪಾರಿಲ್ಲದ ಪರಾತ್ಪರ ದುರ್ಗಮಿದು ಪರಮಪಾವನ ಗೈಸುತಿದೆ
ಪರಿಪರಿ ಸವಿದುಂಬುವ ಸುಜನರ ಸುಮುಖಕೆ ತಾನಿದಿರಿಡುತಿದೆ ೨

ಪ್ರಭಕೆ ಪ್ರಭಾಕರವಾಗಿಹ ಭಾಸ್ಕರಕೋಟಿ ಪ್ರಕಾಶಿಸುತಿದೆ
ಶುಭಕರವಾದ ಸದಾನು ಮಂಗಳ ನೆಲೆ ನಿಭವಾಗಿ ತೋರುತಿದೆ
ಅಭಯಕರವ ಪಡೆದವಗೆನ್ನೊಡೆಯನ ಸುಖ ಸುಲಭಗುಡುತಿದೆ
ಸಬಾಹ್ಯಾಂತ್ರದೆ ಮಹಿಪತಿ ಗುರುದಯ ಸುಭಾಸವಾಗಿ
ಭಾಸುತಿದೆ ಗುರುಮಹಿಮೆ ೩

## ೬೮೫

ಸವಿಸವಿದುಣಬೇಕು ಸುವಿದ್ಯಸಾರದೂಟ ಧ್ರುವ

ಊಟಕೆ ಬ್ಯಾಸರಿಕಿಲ್ಲ ನೋಟದ ಸವಿಸಾರಾಯದ ಬೆಲ್ಲ
ಕೋಟಿಗೊಬ್ಬವನೆ ಬಲ್ಲ ನೀಟಾಗಿದೆಲ್ಲ ೧

ಉಂಡು ತೇಗಿತು ಬಲು ಮುನಿಗಳು ವೃಂದ
ಮಂಡಲದೊಳು ಸವಿಸುಖದಾನಂದ
ಕೊಂಡಾಡಲಿಕ್ಕಿದೆ ಬಂದ ಖಂಡಿತ ಭವಬಂಧ ೨

ತುತ್ತು ತುತ್ತಿಗೆ ತೋರುದು ಸಾರಸ ನಿತ್ಯ
ಮಹಿಪತಿಗೆ ಬಲು ಉಲ್ಲಾಸ
ಹತ್ತಿಲ್ಯದೆ ಬ್ರಹ್ಮರಸ ವಸ್ತುವದೆ ವಿಲಾಸ ೩

## ೬೮೬

ಸವಿಸುಖ ಕಂಡೆ ಸುವಿದ್ಯ ಬ್ರಹ್ಮರಸವ ಧ್ರುವ

ಅಧ್ಯಾತ್ಮಾನಂದದೂಟ ಸಿದ್ಧಾಂತನುಭವದಿಂದ
ಬದ್ಧವಾಗಿ ಸೇವಸಿದ ಇದು ಏಕಾಗ್ರ ೧

ಉಂಡು ಹರುಷವಾಯಿತು ಮಂಡಲದೊಳಗಿಂದು
ಕಂಡು ಆನಂದ ಸುಖವ ಪಿಂಡಾಂಡದೊಳು ೨

ಸುರಸ ಸಾರಾಯದೂಟ ಪರಿಪರಿ ಸವಿದಿನ್ನು
ಹರುಷವಾಯಿತು ಎನಗೆ ತರಳ ಮಹಿಪತಿಗೆ ೩

## ೬೮೭

ಸ್ವಯಂ ಭಾನು ಉದಯವಾದ ನೋಡಿ
ದಯಕರುಣಾನಂದದ ಕೃಪೆಮಾಡಿ ಧ್ರುವ

ರವಿಕೋಟಿತೇಜನೆ ಬಂದ ಮೂಡಿ
ಭವಭ್ರಮದ ಕತ್ತಲ್ಹೋಯಿತೋಡಿ
ದೇವದೇವೋತ್ತಮನ ಪ್ರಭೆ ಕೂಡಿ
ದಿವಾರಾತ್ರಿಲ್ಲದಾಯಿತು ನೋಡಿ ೧

ಜ್ಞಾನ ಗಮ್ಯವಾಗಿದ್ದ ಸುವಸ್ತ
ಕಾಣಬಾವ್ಹಾಯಿತು ಮನಸ್ವಸ್ತ
ಮನದಿಂದವೆ ಆಯಿತು ಮನಸ್ವಸ್ತ
ಘನಮಯವೆ ತೋರಿತು ಸಮಸ್ತ ೨

ತಾನೆ ತನ್ನಿಂದುದಯವಾದ ಪೂರ್ಣ
ನಾನಾವೆಂಬುದ್ಹೋಯಿತನುಮಾನ
ಆನೇಕಲಿದೋರಿತು ಇದೆ ಖೂನ
ದೀನ ಮಹಿಪತಿ ಸ್ವಹಿತ ಸುಧನ ೩

## ೬೮೮

ಸ್ವಯಂ ಭಾನು ಉದಯವಾದ ನೋಡಿ
ಶ್ರೇಯ ಸುಖ ಬೀರುತ ಸದೋದಿತ ಮೂಡಿ ಧ್ರುವ

ಪೂರ್ವ ಪುಣ್ಯಾಚಲದಿ ಉದಯವಾದ
ತೋರ್ವ ಭವಬಂಧವೆಂಬ ಕಗ್ಗತ್ತಲೆ ಹರಿಸಿದ ೧

ಹೃದಯ ಕಮಲವಾಯಿತು ಸುವಿಕಾಸ
ದ್ವಿಧಾ ಭಾವೆಂಬ ಚಕ್ರವಾ ಕೊಂದಾಯಿತು ಹರುಷ ೨

ಸಂಚಿತ ಪ್ರಾಲಬ್ಧ ಕ್ರಿಯಮಾಣ
ವಂಚನಿಲ್ಲದಾಯಿತು ಸಮರ್ಪಣ ಅರ್ಘ್ಯದಾನ ೩

ಮಹಿಪತಿಗಾಯಿತು ಆನಂದೋದಯ
ಸ್ವಹಿತದೋರಲು ಬಂದೆನಗೆ ತತ್ವೋಪಾಯ ೪

## ೬೮೯

ಸ್ವಸ್ತ ಮಾಡಿಕೊಳ್ಳಬೇಕು ವಸ್ತು ತನ್ನೊಳಾಗದ
ಹಸ್ತ ನೀಡಲಿಕ್ಕೆ ಸ್ವಾಮಿ ವಿಸ್ತರಿಸಿ ತೋರುತದೆ ಧ್ರುವ

ಸಾವಧಾನವಾಗಲಿಕ್ಕೆ ಸಾಧಿಸಿ ಬರುತದೆ
ಭಾವ ಬಲಿದು ನೋಡಲಿಕ್ಕೆ ಕಣ್ಣಮುಂದೆ ಭಾಸುತದೆ
ನಿವಾತ ಕೂಡಲಿಕ್ಕೆ ತಾನೆ ತಾನಾಗ್ಯದೆ
ಆವಾಗ ನೋಡಿ ನಿಜ ಥವಥವಿಸುತದೆ ೧

ಆರೇರಿವೆರದು ನೋಡಿ ಗುರುವಾಕ್ಯ ಮಿರಬ್ಯಾಡಿ
ಮೂರಾರು ಜರೆದು ಬಿಡಿ ಬರಿ ಡಂಭದೋರಬ್ಯಾಡಿ

ಸಾರವೆ ಆದೆ ನೋಡಿ ಗುರುಸೇವೆ ಪೂರ್ಣಮಾಡಿ
ದೂರ ಹೋಗಿ ನೋಡಬ್ಯಾಡಿ ತಿರುಗಿ ನಿಮ್ಮೊಳು ನೋಡಿ ೨

ಇದ್ದಲ್ಲೆ ಅದ ಪೂರ್ಣ ಸದ್ಗುರು ಕರುಣ
ಬಿದ್ದಲ್ಲೆ ಬಿದ್ದು ಘನ ಸತ್ಯವಾದ ನಿಜಘನ
ಬುದ್ಧಿವಂತರ ಮನ ಗೆದ್ದು ಅಯಿತುನ್ಮನ
ಸಿದ್ಧರ ನಿಜಸ್ಥಾನ ಶುದ್ಧ ಮಹಿಪತಿ ಸುಪ್ರಾಣ ೩

## ೬೯೦

ಸ್ವಸುಖ ನೋಡಿ ಸದ್ಗುರು ಕೃಪೆಯಿಂದ
ವಿಶ್ವತೋಮುಖ ತೋರುವ ತಾಂ ಗೋವಿಂದ ಧ್ರುವ

ಏನೆಂದ್ಹೇಳಲಯ್ಯ ಅನುಭವದ ಮಾತು
ಖೂನಾಗ್ಯಾದೊಂದೇ ಶಾಶ್ವತ
ಆನಂದೋಭರಿತ ಸ್ವಾನಂದ ಸುಖ
ತಾನೆ ಆಗ್ಯದೆ ಸನ್ಮತ ಘನಬೆರೆದು ನೋಡುವದೀ ಸುಪಥ ೧

ಮಲಕಿನ ಮನುಜರು ಮನವಿಡಬಲ್ಲರೇ
ನಾಲ್ಕು ವೇದ ಸಾರುದಕ
ಒಮ್ಮೆಯಾದರ ನಿಲುಕಿಸಿ ನಿಜ ನೋಡಿದರಸಾಧ್ಯ
ಬೆಳಕೆ ಆಗ್ಯದ ನೋಡಿ ತಿಳಿಕೊಂಡರೆ ೨

ಗುರುವಿನಿಂದಧಿಕಿಲ್ಲ ಅರಿತುಕೊಳ್ಳಿರೊ ಖೂನ
ಪರಮಗತಿಯ ಸಾಧನ
ಸುತತ್ವ ಜ್ಞಾನ ಬೆರೆದು ಮಹಿಪತಿ ಪೂರ್ಣ
ಸದ್ಗುರು ಚರಣಕೆರಗಿ ಮನ ಪಡೆವದೀ ದಯಕರುಣಾ ೩

## ೬೯೧

ಸಾರಿ ಚೆಲ್ಯದೆ ನೋಡಿಹಸ್ವರೂಪ ತೋರುವ ಗುರುದೀಪ ಧ್ರುವ

ಒಳಹೊರಗಿದು ಥಳಥಳಿಸುತಲಿಹುದು
ಮೊಳೆಮಿಂಚಿನಕಳೆ ಝುಳಝುಳಿಸುತ ನಿಜ
ಹೊಳೆಯುತಿಹುದು ಇಳೆಯೊಳಗಿಂದು ತಾ
ಬೆಳಗಿನೊಳಿಹ ಘನ ಬೆಳಗಿನ ಪ್ರಭೆಯು ೧

ಅನುಮಾನವಿಲ್ಲದೆ ಅನುದಿನ ನೋಡಿ
ಜನವನದೊಳು ಘನ ತುಂಬಿ ತುಳುಕುವದು
ಮುನಿಜನ ನೋಡುವಾನಂದದ ಸುಖವಿದು
ಘನಪರಬ್ರಹ್ಮಾನಂದದ ಬೆಳಗು ೨

ಕಣ್ಣಿಗೆ ಕಾಣಿಸುತಿಹುದು ನೋಡಿ
ಭಿನ್ನವಿಲ್ಲದೆ ಅಣುರೇಣುದೊಳೆಲ್ಲ
ಧನ್ಯಗೈಸಿತು ಮಹಿಪತಿ ಜೀವನವಿದು
ತನ್ನಿಂದಲಿ ತಾನೆ ತಾನೊಲಿದು ೩

## ೬೯೨

ಸಾರಿ ಚೆಲ್ಯದೆ ನೋಡಿ ಶ್ರೀಹರಿರೂಪ ತೋರುತಿಹ್ಯ
ಗುರುಪರಮ ಸ್ವರೂಪ ಧ್ರುವ

ಇಡದು ತುಂಬೇದ ನೋಡಿ ಎಡಬಲ ಪೂರ್ಣ
ಬಿಡದೆ ಸೂಸುತಲ್ಯದೆ ಜಡಿದು ನಿಧಾನ ೧

ಸಂಧಿಸಿಹದು ನೋಡಿ ಹಿಂದೆಮುಂದೆಲ್ಲ
ಒಂದು ಮನದಿ ನೋಡಿ ಬಂದು ನೀವೆಲ್ಲ ೨

ಬೆಳದುಕೊಂಬುವಂತೆ ಹೊಳೆಯುತವಲ್ಲ
ಸುಳುಹು ಶ್ರೀ ಕೃಷ್ಣನ ತಿಳುವವರಿಲ್ಲ ೩

ಕಣ್ಣುಗೆಟ್ಟಿರಬ್ಯಾಡಿ ಕಾಣದೆ ಖೂನ ತ
ನ್ನೊಳಗದೆ ನೋಡಿ ಸಾನ್ನಿಧ್ಯಪೂರ್ಣ ೪

ಭಾಸುತಲ್ಯದೆ ಭಾಸ್ಕರಕೋಟಿ ತೇಜ
ದಾಸ ಮಹಿಪತಿ ಪ್ರಾಣದೊಡಿಯ ಸಹಜ ೫

## ೬೯೩

ಸಾರಿ ಚೆಲ್ಯದ ನೋಡಿ ಹರಿರೂಪದ ಮಹಿಮ ಧ್ರುವ

ತುಂಬಿ ತುಳುಕುತದೆ ಕುಂಭಿನಿಯೊಳು ಪೂರ್ಣ
ಇಂಬುದೋರುತಲ್ಯದೇ ಡಿಂಬಿನೊಳಗೆ ತನ್ನ
ಹಂಬಲಿಸಿ ನೋಡಿರ್ಯೋ ಗುಂಭ ಗುರುತವ ೧

ಬಳೆದುಕೊಂಬುವಂತೆ ಹೊಳೆವುತದೆಲ್ಲ ಕಡಿಯ
ಥಳಥಳಗುಡುತ ಸುಳುವು ತೋರುತಲ್ಯದೆ
ಝಳಝಳಿಸುವ ಪ್ರಭೆ ಮಳೆಮಿಂಚುಗಳು ೨

ಇಡಿದು ತುಂಬೇದ ನೋಡಿ ಅಡಿಗಡಿಗಾನಂದದಲಿ
ಅಡಿಮೇಲು ತಿಳಿಯದೆ ಎಡಬಲದೊಳಾದ
ಮೂಢ ಮಹಿಪತಿ ಪ್ರಾಣ ಬಿಡದೆ ಸಲಹುತ ೩

## ೬೯೪

ಸಾವಧಾನವಾಗಿ ನೋಡಿ ನಿಜ
ಭಾವಬಲಿದು ನೋಡಲಿಕ್ಕದೆ ವಸ್ತು ಸಹಜ ಧ್ರುವ

ಹತ್ತಿಲಿದೆ ತಾ ಸರ್ವಕಾಲ
ಚಿತ್ತೊಂದೆ ಮಾಡಿ ನೋಡು ಗುರುಪಾದ ಕಮಲ
ನೆತ್ತಿಯೊಳಗದೆ ನಿಶ್ಚಲ
ಉತ್ತಮೋತ್ತವಾದ ಸದ್ವಸ್ತು ಅನುಕೂಲ ೧

ಅತ್ತಿತ್ತಲೆ ನೋಡಲಾಗದು
ಮೊತ್ತವಾಗಿ ಸುಬ್ರಹ್ಮ ತುಂಬಿ ತುಳುಕುವದು
ಸುತ್ತೆ ಸೂಸ್ಯಾಡುತಲಿಹುದು
ಮತ್ತೆ ಉನ್ಮನವಾಗಿ ತನ್ನೊಳು ತಾ ನೋಡುವದು ೨

ಸಾರವೆ ಅದೆ ಸತ್ಯನೋಡಿ
ದೂರೆಂಬ ಮಿಥ್ಯ ಭ್ರಾಂತನೆ ಈಡಾಡಿ
ಗುರುಕೃಪೆಯಿಂದ ನಿಜಗೂಡಿ
ತರಳ ಮಹಿಪತಿ ಹರುಷಗೈದ ಬೆರೆದಾಡಿ ೩

## ೬೯೫

ಸಾವಧಾನವಾಗಿ ನೋಡಿ ಶ್ರೀ ವಾಸುದೇವನ ಧ್ರುವ

ಭಾವ ಬಲಿದು ಪೂರ್ಣ ದೇವದೇವೇಶನ ಖೂನ
ಆವಾಗ ನೋಡಿ ಚರಣ ಸೇವಿಸಿ ನಿಧಾನ ೧

ಕಣ್ಣಮುಂದೆ ಕಟ್ಯಾನೆ ಭಿನ್ನವಿಲ್ಲದೆ ತುಂಬ್ಯಾನೆ
ಸಣ್ಣ ದೊಡ್ಡರೊಳಗ್ಹಾನೆ ಕಾಣಿಸುತಲ್ಯಾನೆ ೨

ಚಿತ್ತಮನೊಂದು ಮಾಡಿ ಹತ್ತಿಲಿ ಸಾಭ್ಯಸ್ತ ನೋಡಿ
ವಸ್ತು ಮಹಿಪತಿಯ ಕೊಂಡಾಡಿ ನಿತ್ಯ ನಿಜಗೂಡಿ ೩

## ೬೯೬

ಸ್ವಾನಂದದ ಘನಸುಖ ಏನೆಂದ್ಹೇಳಲಿ ಕೌತುಕ ಧ್ರುವ

ಬಲಗೊಂಡದೆ ಬ್ರಹ್ಮಭಾವ ನೆಲಗೊಂಡದೆ ಸರ್ವದ
ಬಲುದೋರುತದೆ ಸುಸ್ವಾದ ಸುಲಭ ಸದ್ಗುರು ಪ್ರಸಾದ ೧

ತಾನಾಗ್ಯದೆ ತಾರ್ಕಣ್ಯಸ್ವಾನುಭವದ ಸುಪುಣ್ಯ
ಮುನಿಜನರೆ ಧನ್ಯಧನ್ಯ ಅಣುರೇಣುಕ ತಾ ಮಾನ್ಯ ೨

ಮನೋನ್ಮನದಾಶ್ರಯ ಭಾನುಕೋಟಿ ಉದಯ
ದೀನ ಮಹಿಪತಿಗಿದೆ ಸಾಹ್ಯ ಅನುದಿನಿದೇ ಉಚ್ಛ್ರಾಯ ೩

## ೬೯೭

ಸ್ವಾನಂದದ ಸುಖ ಏನೆಂದ್ಹೇಳಲಿ ಕೌತುಕ ಧ್ರುವ

ಒಡೆದು ಹೇಳುವದಲ್ಲ ಹಿಡಿದು ತಾ ಕೊಡಲಿಕ್ಕಿಲ್ಲ
ಪಡೆದುಕೊಂಡವನೆ ಬಲ್ಲ ಗೂಡಿನ ಸೊಲ್ಲ ೧

ಸಕ್ಕರಿ ಸವಿದಂತೆ ಮೂಕ ಪ್ರಕಟಿಸೇನೆಂದರೆ ಸುಖ
ಯುಕುತಿಗೆ ಬಾರದು ನಿಶ್ಶಂಕ ಸುಖ ಅಲೌಕಿಕ ೨

ಮುನಿಜನರ ಹೆಜ್ಜೆಮೆಟ್ಟು ಏನೆಂದ್ಹೇಳಲಿ ನಾ ಗುಟ್ಟು
ಅನುದಿನ ಮಹಿಪತಿ ಗುಟ್ಟು ಘನ ಕೈ ಗೊಟ್ಟು ೩

## ೬೯೮

ಸ್ವಾನುಭವದ ಸುಖ ಸಾಧಿಸಿ ನೋಡಿ
ತಾನಾಗದೇ ನಿಜಗೂಡಿ ಸ್ವಾನುಭವ ಧ್ರುವ

ಮನದ ಕೊನಿಯಲ್ಯದ ಘನಸುಖದಾಟ
ಅನುಭವಕಿದು ಬಲು ನೀಟ
ಖೂನದೋರುವ ಘನ ಗುರುದಯ ನೋಟ
ಮುನಿಜನಕಾಗುವ ಪ್ರಗಟ ೧

ಸುರಿಯುತಲ್ಯದ ಸುಖ ಸಂತ್ರಾಧಾರಿ
ಇರುಳ ಹಗಲದೀ ಪರಿ
ಹರುಷಗೈಸುತ ಅನುದಿನ ನಿಜಸಾರಿ
ತೋರುತಲ್ಯದ ಘನ ಬೀರಿ ೨

ಸ್ವಹಿತ ಸಾಧನಕಿದು ಸವಿಸಾರ
ಮಹಾನುಭವದಾಗರ
ಮಹಿಪತಿಗಿದು ಮಾಡುವ ಮನೋಹರ
ಇಹಪರ ಘನ ಸಹಕಾರ ೩

## ೬೯೯

ಸ್ವಾನುಭವದ ಸುಖ ಸಾಧಿಸಿ ನೋಡಿರೋ ನೇಮದಿಂದ
ಘನ ಗುರು ಕೃಪೆಯಿಂದ ಅನುಭವಿಸಲು ಬ್ರಹ್ಮಾನಂದ ಧ್ರುವ

ಶಿಖಾಮಧ್ಯದಲಿ ಪೂರ್ಣ ಸುಖಗರವುತಲ್ಯದೆ ಸಂತ್ರಾಧಾರಿ
ಸಕಲವೆಲ್ಲಕೆ ಸನ್ಮತವಾಗಿ ತೋರುವದೊಂದೇ ಪರಿ
ಶುಕಾದಿ ಮುನಿಗಳು ಪ್ರಕಟಿಸಿ ಹೇಳಿಹರು ಖೂನದೋರಿ
ಬೇಕಾದರೆ ಇದು ನೋಡಬೇಕು ಷಡುಚಕ್ರವೇರಿ ೧

ಸಾಮಾನ್ಯವಲ್ಲವಿದು ಸಹಸ್ರ ಕೋಟಿಗೊಬ್ಬ ಬಲ್ಲ ಖೂನ
ಕಾಮಾಂಧದೊಳಗಿದ್ದ ಮನುಜ ಪ್ರಾಣಿಗಳು ಬಲ್ಲವೇನ
ತಾಮಸಿಗಳಿಗಿದು ತಾರ್ಕಣ್ಯವಾಗುವದಲ್ಲ ಗಮ್ಯಸ್ಥಾನ
ಸ್ವಾಮಿ ಸದ್ಗುರು ದಯಮಾಡಿದರಹುದು ಸಮ್ಯಗಜ್ಞಾನ ೨

ಶಿರೋರತ್ನವಾಗಿ ವಂದಿಸಿಕೊಂಬುವದಿದೆಲ್ಲಕೆ ಪೂಜ್ಯ
ಹರುಷಗೈಸುವ ಪುಣ್ಯ ಪರಮ ಭಕ್ತರಿಗಿದೆವೆ ಸಾಯೋಜ್ಯ
ತರಳ ಮಹಿಪತಿಗಿದೆ ಸ್ವ ಸುಖದೋರುವ ಸುಸಾಮ್ರಾಜ್ಯ
ಶಿರದಲಿ ಕರವಿಟ್ಟು ತೋರಿದ ಗುರು ಭಾನುಕೋಟಿತೇಜ ೩

## ೭೦೦

ಸಿಕ್ಕಿತೆನಗೊಂದು ಸುವಸ್ತ ಮುಖ್ಯದಂತಸ್ಥ
ಅಕ್ಕಿ ಮನಕ್ಕಾಯಿತು ಸ್ವಸ್ತ ದಕ್ಕಿ ಪ್ರಶಸ್ತ ೧

ಕಟ್ಟಿ ಇಡುವದಲ್ಲ ಬಿಟ್ಟರೆ ಹೋಗುವದಲ್ಲ
ಮುಟ್ಟಿದರೆ ಬಿಡುವುದಿಲ್ಲ ಗುಟ್ಟು ಕೇಳೆಲ್ಲ ೨

ಮುಚ್ಚುಮರಿಲಿಹುದಲ್ಲ ಬಚ್ಚಿಟ್ಟು ಕೊಂಬಂಥದಲ್ಲ
ನೆಚ್ಚಿದ ಮಹಿಮನೆ ಬಲ್ಲ ಆಶ್ಚರ್ಯವಲ್ಲ ೩

ಭಾನುಕೋಟಿ ತೇಜನಾಗಿ ಘನದಯದಲೊದಗಿ
ತಾನೆ ಸಿಕ್ಕಿತೈನಗಾಗಿ ಸಾನುಕೂಲಾಗಿ ೪

ಮಿಹಿತದ ಅಗರ ಸ್ವಹಿತ ಸುಖಸಾಗರ
ಮಹಿಪತಿಯ ಮನೋಹರ ಸಹಕಾರ ೫

## ೭೦೧

ಸುರಿಸುವ ಸುಖ ಸಂಭ್ರಮ ಸಾರಗುಣಗರಸುವ
ಘನವದನೆ ಸುಕರುಣ
ಬೆರಸುವ ನಿಜವದನೆ ದೃಢಧ್ಯಾನ ಸ್ಮರಿಸೋ ಮನವೆ
ಸದ್ಗುರುಪಾದ ಪೂರ್ಣ ೧

ಪರಿ ಪರಿ ಸುಖದೋರುದು ನಿಜಖೂನ ಮಿರಿಮಿರಿ ಬಲು
ಮಿಂಚುದು ದಿವ್ಯಗುಣ
ಥರಥರದೋರುವುದು ಸಾರಜ್ಞಾನ ಸ್ಮರಿಸೋ ಮನವೆ
ಸದ್ಗುರುಪಾದ ಪೂರ್ಣ ೨

ಸುರಮುನಿ ಜನರಿಗಿದೆ ಜೀವಪ್ರಾಣ ಪರಮಾಮೃತಸಾರ
ನಿಜತತ್ವಜ್ಞಾನ
ಅರಿಬೇಕಿದೊಂದೆವೆ ಪ್ರತಿಕ್ಷಣ ಕ್ಷಣ ಸ್ಮರಿಸೋ ಮನವೆ
ಸದ್ಗುರುಪಾದ ಪೂರ್ಣ ೩

ಧರಿಯೊಳಿದೊಂದೆವೆ ಸಕಲಾರ್ಥ ಘನ ಹರುಷೋಕ್ತವಾಗುವ
ನಿಜ ದಿವ್ಯಸ್ಥಾನ
ಗುರುಮುಟ್ಟಿ ಗುರುವಾಗಲು ಸಾರಗುಣ ಸ್ಮರಿಸೋ
ಮನವೆ ಸದ್ಗುರುಪಾದ ಪೂರ್ಣ ೪

ಹರಿಸುವ ಮಹಾಪಾಪ ಗುರುನಾಮಗುಣ ತೆರಸುವ
ನಿಜದೃಷ್ಟಿ ಗುರುಕೃಪೆ ಜ್ಞಾನ
ಅರುವಂತೆ ಮಹಿಪತಿ ಬೆರಿಯೋ ನಿಧಾನ ಸ್ಮರಿಸೋ
ಮನವೇ ಸದ್ಗುರುವಿನ ಪಾದ ಪೂರ್ಣ ೫

## ೭೦೨

ಸೂರ್‍ಯಾಡುವ ಬನ್ನಿ ಹರಿಯ ನಾಮಾಮೃತವ ಪೂರ್ಣ ಧ್ರುವ

ಸುರಿ ಸುರಿದು ಸಾರಾಯ ತರುತರುವಾಯ ಸೇವಿಸಿ
ಥರಥರಲಿಡುವ ಬನ್ನಿ ಸುವಾಡವ ಕೊಂಡು ೧

ಸಾರ್ಥಕ ಮಾಡುವದಿದೆ ಗುರ್ತಕ ಬಂದಿಹ ಜನಮ ತಾ ಕರ್ತು
ಸದ್ಗುರು ಮಹಿಮೆ ಪ್ರಾರ್ಥಿಸಿ ಪರಿಪೂರ್ಣ ೨

ಸವಿಸವಿ ಮಾಡಿಕೊಂಡು ಸೇವಿಸಿ ಮಹಿಪತಿ ನೋಡಿ
ಪಾವನ ಪಾದ ನಿಜಗೂಡಿ ಭವಪಾಶೀಡ್ಯಾಡಿ ೩

## ೭೦೩

ಹಬ್ಬವೆನಗಿಂದು ಧರೆಯೊಳು ನೋಡಿ
ಇಬ್ಬರೊಂದಾದ ನೆಲೆನಿಜಗೂಡಿ
ಉಬ್ಬಿ ಉನ್ಮನವಾಗಿ ಎನ್ನೊಳು
ಕೊಬ್ಬಿದೆನು ಘನಸುಖ ಬೆರದಾಡಿ ೧

ಉಬ್ಬಸೆನಗಿನ್ನು ಹಿಂಗಿತು ನೋಡಿ
ಹಬ್ಬದೂಟದ ಸವಿರಸಗೂಡಿ
ಹಬ್ಬಿಹವಣಿಸಿ ಬೀಳುವ
ಗರ್ಭಪಾಶವನೆಗಳೆದೆನು ಈಡ್ಯಾಡಿ ೨

ಹಬ್ಬವಾಯಿತು ಮಹಿಪತಿಗಿಂದು
ಒಬ್ಬನಿಜವಾದ ಗುರು ಕೃಪಾಸಿಂಧು
ಹಬ್ಬಹರುಷದಿ ನೆಲೆನಿಭಗೊಂಡಿನ್ನು
ಶೋಭಿಸಿತು ಶುಭಕರ ದಿವಸಿಂದು ೩

ಆಯ = ರಹಸ್ಯ
ಆಯತ = ಅಣಿಗೊಳಿಸು
ಆಲ್ಪರಿ = ಅಂಗಲಾಚು, ಬೇಡಿಕೊಳ್ಳು
ಆಲೇಶ = ಸಂಶಯ
ಆವ್ಹಾಟ = ಆರ್ಭಟ

ಇ

ಇಗಡತನ = ವಿಗಡತನ
ಇಮ್ಮನ = ಎರಡುಮನಸ್ಸು, ದ್ವಂದ್ವ
ಇಲ್ಲೇವೇ = ಇಲ್ಲಿಯೇ
ಇಹ್ಯ = ಇರುವ
ಇಂಬು = ಆಶ್ರಯ

ಈ

ಈಡ್ಯಾಡಿ = ಚೆಲ್ಲಾಡಿ, ಬಿಸುಡಿ
ಈವ = ಕೊಡುವ
ಈವ್ಹಾ = ಇರುವ
ಈವ್ಹಾಂಗ = ಕೊಡುವಹಾಗೆ
ಈಸಿ = ಈಜಿ
ಈಹ = ಇರುವ

ಉ

ಉಗಮ = ಮೂಲ
ಉಚ್ಛಿಷ್ಟ = ತಿಂದು ಮಿಕ್ಕಿದ್ದು
ಉದ್ಯೋಪ = ಉದ್ಯಾಪನೆ, ಪವಿತ್ರಕಾರ್ಯದ ಮುಕ್ತಾಯ ಸಮಾರಂಭ
ಉನ್ಮನಿ = ಊರ್ಧ್ವಮನಸ್ಥಿತಿ, ಸಮಾಧಿ ಸ್ಥಿತಿ, ದೈವತ್ವದೊಂದಿಗೆ ಕೂಡಿದ ಮನಸ್ಥಿತಿ
ಉಡಿಗಿ = ಉಡುಗೆ, ಬಟ್ಟೆ
ಉಮ್ಮಸ = ಹುಮ್ಮಸ್ಸು
ಉಮ್ಮು = ಉಂಣು, ತಿನ್ನು
ಉರಳಿ = ಉಂಡೆ
ಉಲವು = ಉಲುಹು ಶಬ್ದಮಾಡು
ಉಳ್ಳ = ಹೊಂದಿದ,. ಉಳಿದ
ಉಂಗುಟ = ಉಂಗುಷ್ಠ, ಹೆಬ್ಬೆರಳು

ಎ

ಎತ್ಯಾಡಿಸು = ಎತ್ತಿ ಆಡಿಸು
ಎದುರಿಡು = ಎದುರಾಗು, ಸಮ್ಮುಖವಾಗು
ಎಡಿ = ನೈವೇದ್ಯ
ಎಡೆ = ಅವಕಾಶ
ಎಣಿಕೆ = ಲೆಕ್ಕಾಚಾರ
ಎರಕ = ಸುರಿ, ತುಂಬು
ಎರಗು = ನಮಸ್ಕರಿಸು
ಎರವಿನಮನೆ = ಬಾಡಿಗೆ ಮನೆ, ಶರೀರ
ಎವಿ = ರೆಪ್ಪೆ
ಎಸು = ಹೊಡೆ

ಏ

ಏಸು = ಎಷ್ಟು

ಒ

ಒಟ್ಟು = ರಾಶಿಮಾಡು, ಕೂಡಿಸು
ಒಪ್ಪಿಲಿ = ಒಪ್ಪಿಗೆಯಿಂದ
ಒಲ್ಲಭ = ವಲ್ಲಭ, ಒಡೆಯ
ಒಳ್ಯಾವರ = ಒಳ್ಳೆಯವರ

ಕ

ಕಕ್ಕುಲಾತಿ = ಕಳವಳ, ಕರುಣೆ, ಅಂತಃಕರಣ
ಕನಕಗರಿಸು = ಕನವರಿಸು
ಕಡಗಂಡು = ಅನುಭವಿಸಿ, ಗೊತ್ತು ಮಾಡಿಕೊಂಡು
ಕಡವು = ಮಥಿಸು ಕಡೆಯುವದು
ಕರಿಕೆ = ಗರಿಕೆ
ಕರಣೆ = ಕರಣಿ, ಗಡ್ಡೆ
ಕಲ್ಲೋಳ = ಕಲ್ಲೋಳ, ಮಹಾತರಂಗ
ಕಳಲು = ಮಜ್ಜಿಗೆ
ಕಳೆ = ಕಾಂತಿ
ಕಳೇವರ = ಶರೀರ
ಕಳೆಮಳೆಗಳು = ಕಾಂತಿವೃಷ್ಟಿ
ಕಂಟಕ = ಮುಳ್ಳು
ಕಂಜ = ಕಮಲ
ಕಾಕಬುದ್ಧಿ = ನೀಚಬುದ್ಧಿ
ಕಾಣಿಕೆ = ಕಾಣಿಕೆ, ನೋಟ
ಕಾಜು = ಗಾಜು
ಕಾಮ್ಯ = ಇಷ್ಟಾರ್ಥ
ಕಾವ = ಕಾಯುವ, ಕಾಪಾಡುವ
ಕಾವನಯ್ಯ = ಮನ್ಮಥನ ತಂದೆ, ಕೃಷ್ಣ
ಕಾಳವ್ಯಾಳ್ಯ = ಕೆಟ್ಟಕಾಲ ಕಾಲವೇಳೆ
ಕಾಳೋ = ಕತ್ತಲೆ
ಕ್ಯಾದಗಿ = ಕೇದಗೆ
ಕೀಲ = ರಹಸ್ಯ
ಕೀಲು = ಮರ್ಮ ಗುಟ್ಟು
ಕುಕ್ಕಡಿ = ಉಂಡೆ
ಕುಟಲ = ಕುಟಿಲ
ಕುಡಿ = ತುದಿ
ಕುರುವ್ಹು = ಕುರುಹು, ಚಿಹ್ನ, ಗುರುತು
ಕುಸಿಕಿರಿದು = ಸಣ್ಣದಾಗಿಬಡೆದು
ಕುಸುಕು = ಮೆತ್ತಗೆ ಕುಕ್ಕು
ಕೂಪ = ಬಾವಿ
ಕೆರಿ = ಕೆರೆ, ಕೊಳ
ಕೈಗೂಡು = ಸಫಲವಾಗು
ಕೈವಲ್ಯ = ಮೋಕ್ಷ
ಕೊಯಿಲಿ = ಕುಯಿಲು, ಕುಯ್ಯಲು ಸಿದ್ಧವಾಗಿರುವ ಬೆಳೆ
ಕೋಟಲಿ = ತೊಂದರೆ ಕಷ್ಟ
ಕೋಳ = ಸಂಕೋಲೆ

ಖ

ಖಣಿ = ಗಣಿ
ಖರೆ = ನಿಜ
ಖುಲ್ಲ = ನೀಚ
ಖೂನ = ಗುರುತು
ಖೋಡಿ = ಕೆಟ್ಟವನು

ಗ

ಗಡಕ = ತೊಡಗಿ, ಸೇರಿ,
ಸರಕನೆ = ಕೂಡಲೆ ಗಕ್ಕನೆ
ಗ್ರಾಸ = ಆಹಾರ
ಗುಕ್ಕಿ = ಒಳಉಸುರಿನಲ್ಲಿ ಮಾತುನುಂಗಿ
ಗುರ್ತು = ಗುರುತು
ಗುದ್ದು = ಬಿಲ
ಗುಟ್ಟಿಲೆ = ಗುಟ್ಟಾಗಿ, ರಹಸ್ಯವಾಗಿ
ಗುಪಿತ = ಗುಪ್ತ
ಗುಂಭ = ರಹಸ್ಯ, ಗಹನ
ಗೊಂತು = ಗೊತ್ತು
ಗೋವಿಸು = ಅಕಳನ್ನು ಮೇಯಿಸು

ಘ

ಘಸಣಿ = ಚಿಂತೆ
ಘಳಿಗಿ = ತೀಡು, ಮಡಿಕೆ
ಘೀಳಿಸು = ಮೊರೆತ

ಚ

ಚಪ್ಪಗೊಡಲಿ = ಚೂಪಾದ ಕೊಡಲಿ
ಚಪ್ಪರಿದೆ = ಸವಿದೆ, ಚಪ್ಪರಿಸಿದೆ
ಚಪ್ಪರಿಸು = ಸವಿಮಾಡಿಕೊಳ್ಳು
ಚಲ್ಲೇದ = ಚೆಲ್ಲಿರುವುದು
ಚಾಲ್ವರಿ = ಅಂಗಲಾಚು
ಚಿದ್ಘನ = ಪರಮಾತ್ಮ, ಪರವಸ್ತು (ಚಿತ್+ಘನ)
ಚೇತಿಸಿ = ಚಿಂತಿಸಿ
ಚೋಳಿ = ಹೋಳಿ
ಚೌರ = ಚಾಮರ

ಜ

ಜಗಜೇಟಿ = ಜಗಜೆಟ್ಟಿ, ಜಗತ್ತನ್ನು ಗೆದ್ದವ
ಜತನ = ಜೋಪಾನ, ಎಚ್ಚರಿಕೆ
ಜಡಿದು = ಗದರಿಸು
ಜಂತ್ರ = ಯಂತ್ರ
ಜಾಗಿಸು = ಎಚ್ಚರಿಸು
ಜಾಡು = ದಾರಿ
ಜಾಲ = ಬಲೆ
ಜೀಕಳಿ = ಪಿಚಕಾರಿ, ಜೀಕೊರ್ಳವಿ
ಜೋಹರ = ಜವಾಹಿರ ಮುತ್ತುರತ್ನಗಳ ವ್ಯಾಪಾರಿ

**ಝ**

ಝರಿ = ಶಿಲೆ
ಝಲ್ಲಿಸಿ = ಸೋಸಿ

**ಟ**

ಟೂಕಿ = ತೂಕ

**ಠ**

ಠವಿಸು = ಹೊಳೆಯಿಸು
ಠಾವು = ಸ್ಥಳ, ಗೊತ್ತು

**ಡ**

ಡಿಂಭ = ದೇಹ
ಡೊಂಕಿ = ವಕ್ರವಾದ

**ಢ**

ಢಾಳಿಸು = ಬೀಸು

**ತ**

ತರಣೋಪಾಯ =ಪರಿಹಾರಮಾರ್ಗ
ತಳಿಗೆ = ಹರಿವಾಣ, ತಟ್ಟೆ
ತಳ್ಳಿ = ತಳಿ, ವಂಶ
ತ್ಯರ = ತರ
ತಂತು = ಸೂತ್ರ, ನೂಲು ಎಳೆ, ದಾರ
ತಾಮಸ = ಜಡ
ತಾರಕ = ನಿವಾರಕ
ತಾಹರು = ತರುವರು
ತ್ರಾಹಿ = ರಕ್ಷಿಸು
ತಿಗಡತನ = ತಿಗುಳುತನ, ವಿಗಡತನ
ತಿರಹು = ತಿರುವು
ತುಚ್ಛ = ನೀಚ
ತುತ್ತಾಯಿತ್ತ = ತುತ್ತುಮಾಡಿ, ಅಂತಃಕರುಣದಿಂದ
ತುಟ್ಟಿಲೆ = ತುಟಿಯಿಂದ
ತುಡುಗ = ಕಳ್ಳ
ತುಡುಕು = ಹಿಡಿ
ತೆಕ್ಕಿಸು = ಅಪ್ಪಿಕೊಳ್ಳು
ತೆರವು = ಖಾಲಿಮಾಡು, ಬಿಟ್ಟುಕೊಡು
ತೆರ್ವು = ತೆರೆಯುವದು
ತೇಕಿ = ಆಯಾಸಪಡು, ಜೋರಾಗಿ. ಉಸಿರಾಡಿಸು
ತೊಡಕು = ಕಗ್ಗಂಟು

**ದ**

ದಕ್ಕು = ಲಭಿಸು
ದತ್ತ = ಲಭ್ಯ
ದಾಯ = ಪಾಲು
ದಾವನು = ಯಾವನು
ದ್ಯಾವರು = ದೇವರು
ದುಗುಡಿ = ದು:ಖ
ದುರಿತ = ಪಾಪ, ಕಷ್ಟ, ತೊಂದರೆ
ದೇಶಿಕ = ಆಚಾರ್ಯ
ದೋರುದು = ತೋರುವುದು

**ಧ**

ಧ್ಯಾತ = ಧ್ಯಾನ
ಧ್ಯಾಸ = ಧ್ಯಾನ
ಧೂತ = ನಿವಾರಣೆ
ಧ್ಯೇಯ = ಗುರಿ
ಧೋಕಾ = ಆಘಾತ

**ನ**

ನಕ್ರ = ಮೊಸಳೆ
ನರ್ಕ = ನರಕ
ನಗ = ಬೆಟ್ಟ
ನಾದಿ = ತಿಕ್ಕಿ
ನಾಟಿ = ನಟ್ಟು, ಅಚ್ಚೊತ್ತಿ
ನಿಗಮ = ವೇದ
ನಿತ್ಯಭಿನವ = ನಿತ್ಯನೂತನ
ನಿರ್ತ = ನಿತ್ಯ
ನಿದರುಶನ = ನಿದರ್ಶನ
ನಿಟಿಲ = ಹಣೆ
ನಿಬ್ಬಣ = ಮೆರವಣಿಗೆ
ನಿರ್ಭರ = ಅತಿಶಯ
ನಿಮಿತ್ಯ = ನಿಮಿತ್ತ, ಕಾರಣ
ನಿರ್ವಾಣ = ಮೋಕ್ಷ
ನಿವಾಂತ = ಶಾಂತ
ನಿರ್ವಾಣಿ = ಮುಕ್ತಿದಾಯಕ
ನಿಶ್ಯಾನಿ = ಧ್ವಜ, ಬಾವುಟ
ನೀಗಿ = ಕಳೆದು
ನೀಟ = ನೇರ
ನುತ = ಸ್ತುತಿಸಲ್ಪಡುವ
ನುಲ್ಕಿ = ದಾರ
ನೆಗಹು = ಎತ್ತು
ನೆಚ್ಚು = ನಂಬು
ನೆತ್ತಿ = ತಲೆ
ನೆರಿ = ನೆರೆ ಪಕ್ಕದ
ನೆಲೆ = ಮೂಲ
ನೆಲೆನಿಭ = ಆಧಾರ
ನೆವನ = ನೆಪ
ನೇತಿ–ನೇತಿ = ಇದಲ್ಲ, ಇದಲ್ಲ

**ಪ**

ಪಟ = ಬಟ್ಟೆ
ಪಡಗ = ಪಾತ್ರೆ
ಪಡಿಹಾರ = ದ್ವಾರಪಾಲಕ
ಪಯಸ್ವಿನಿ = ಹಾಲು
ಪರಮಾನ್ನ = ಪಾಯಸ
ಪರಾಮರಿಸಿ = ವಿಚಾರಿಸಿ
ಪರಿಯಾಯ = ಬೇರೆಯಾಗು, ಬದಲಾಗು
ಪಸರಿಸ್ಯದ = ಪಸರಿಸಿದೆ
ಪಂಜ = ಪ್ರಾಣಿಗಳ ಉಗುರುಸಹಿತ ಅಂಗಾಲು ಅಂಗೈ
ಪ್ರಣಮ್ಯ = ಪ್ರಣವ
ಪ್ರಣವ = ಓಂಕಾರ ಮಂತ್ರ
ಪ್ರಸ್ತ = ಹಬ್ಬ
ಪಾಮರ = ಶ್ರೀಸಾಮಾನ್ಯ
ಪಾರ = ತೀರ
ಪಾರಣೆ = ಉಪವಾಸದ ಅನಂತರದ ಊಟ
ಪಾರಾವಾರ = ಮೇರೆ, ಸಮುದ್ರ

ಪಾವನ್ನ = ಪವಿತ್ರ
ಪ್ರಾಲಬ್ಧ = ಪ್ರಾರಬ್ಧ
ಪ್ರಾಂಜಲ = ನಿರ್ಮಲ ಸ್ವಚ್ಛ
ಪೂರಿಸು = ನೆರವೇರಿಸು
ಪೋಕು = ನೀಚ ದುಷ್ಟ

## ಫ

ಫಕ್ಕಸಾರಿ = ಸುಮ್ಮನೆ, ಬೆಲೆಯಿಲ್ಲದೆ, ಮಗಸೆಟ್ಟೆ, ಫುಕ್ಕಸಾಟೆ
ಫಜ್ಜಿಗೆ = ಫಾಜೆಗೆ, ಗುರಿವಟ್ಟುವ ಸ್ಥಳ
ಫಣಿ = ಹೆಡೆ
ಫುಗುಡಿ = ಹೆಣ್ಣುಮಕ್ಕಳ ಒಂದು ಆಟ

## ಬ

ಬಡಿವಾರ = ಬಡಾಯಿ, ಡೌಲು
ಬಧಿರತ್ವ = ಕಿವುಡತನ
ಬರುದೆ = ಬರುವದೆ
ಬಲಿ = ಬಲೆ
ಬಲ್ಲಿದ = ಬಲಿಷ್ಠ, ಬಲ್ಲವನು
ಬವಣೆ = ತೊಂದರೆ
ಬಂಟ = ಸೇವಕ
ಬಲುವ = ಬಲಿಯುವ ಸ್ಥಿರವಾದ
ಬಾಯಾರ = ಬಾಯ್ತುಂಬ
ಬಾವ್ಹಾಂಗ = ಬರುತ್ತಿರುವಂತೆ
ಬಾಹ = ಬರುವವನು
ಬಾಹ್ಯಾಂತ್ರ = ಹೊರಒಳಗೆ
ಬ್ಯಾಗ = ಬೇಗ
ಬಿದ್ದಿಹ್ಯ = ಬಿದ್ದಿರುವ
ಬಿನುಗು = ಕ್ಷುದ್ರ (ಚಿಲ್ಲರೆ)
ಬೂಟಕ = ಡಂಭ, ಬೂಟಾಡಿಕೆ
ಬೆಜ್ಜ = ಪಕ್ಷಿಗಳ ಬೆದರಿಕೆಗೆ ಕಟ್ಟುವ ಸಾಧನ
ಬೆಜ್ಜರ = ಅಂಜಿಕೆ
ಬೆರ್ತು = ಬೆರೆತು
ಬೇಹಿನವರು = ಗುಪ್ತಚಾರರು
ಬೈಗು = ಸಂಜೆ
ಬೊಮ್ಮ = ಬ್ರಹ್ಮ

## ಭ

ಭಗತ = ಭಕ್ತ
ಭವ = ಜನ್ಮ
ಭವತಳಿ = ಜನ್ಮಾಂತರ ಸಂಬಂಧ
ಭವನಿದ್ರೆ = ಜನ್ಮವೆಂಬ ನಿದ್ದೆ
ಭವಾರ್ಣವ = ಜನ್ಮ ಸಮುದ್ರ
ಭಸಿಗೆ = ಫಪಿಗೆ, ಮೋಸ
ಭಾಸಿ = ಭಾಷೆ, ವಾಗ್ದಾನ, ಪ್ರತಿಜ್ಞೆ
ಭಾಸು = ಹೊಳೆ
ಭಿಡಿ–ಭಿಡೆ = ದಾಕ್ಷಿಣ್ಯ
ಭುಲ್ಲೈಸು = ಉಪಾಯದಿಂದ ಒಲಿಸು
ಭ್ರೂಮಧ್ಯ = ಹುಬ್ಬುಗಳ ನಡುವೆ
ಭೋಕ್ತ = ಸವಿದವನು, ಅನುಭವಿ

## ಮ

ಮಚ್ಚರ = ಮತ್ಸರ, ಅಸೂಯೆ
ಮಟಿಸು = ಮಥಿಸು
ಮದೂಣಿಗ = ಮದುವಣಿಗ
ಮಧುಪ = ದುಂಬಿ
ಮನ್ನೆವಾರ = ದಳಪತಿ
ಮರ್ಥವು = ಮರೆವು
ಮರೆಯುಗು = ಮೊರೆಹೊಗು, ಶರಣಾಗು
ಮಲ್ಕು/ಮಲಕು = ಗಂಟು, ತೊಡಕು
ಮರ್ವ = ಮರೆವು
ಮರ್ವು = ಮರೆವು
ಮಂಚಿಕೆ = ಅಟ್ಟಣಿ
ಮಾ = ಸತ್ಯಸೂಚಕ ಉದ್ಗಾರ
ಮಂತು = ಕಡೆಗೋಲು
ಮಾನ್ನಣೆ = ಮಾನ, ಮನ್ನಣೆ
ಮ್ಯಾಳ = ಮೇಳ, ಸಮೂಹ
ಮೃಷ್ಟಾನ್ನ = ಸವಿಯಾದ ಊಟ
ಮುಕ್ಕು = ಭಂಗ
ಮುಣುಗು = ಮುಳುಗು
ಮುರುಹು = ಪಶುಗಳಿಗೆ ನೀಡುವ ನುಚ್ಚಿನ ಆಹಾರ
ಮುಂಬಿಗೆ = ಮುಂಚಿಗೆ, ಮೊದಲಿಗೆ
ಮೊಳೆ = ಮೊಳಕೆ
ಮೋನ = ಮೌನ

## ಯ

ಯುಗತಿ = ಯುಕ್ತಿ

## ರ

ರಗಡಿಸು = ರಗಳೆಮಾಡು
ರಚ್ಚಿಗೇಳು = ಸಿಕ್ಕಾಪಟ್ಟೆ ಸಿಟ್ಟಿಗೇಳು
ರಮ್ಮಿಸು = ರಮಿಸು, ಸಂತೋಷಪಡಿಸು
ರಂಜಕ = ಮನೋಹರ
ರಾವುತ = ಕುದುರೆ ಸವಾರ
ರಿದ್ಧಿ = ವೃದ್ಧಿ

## ಲ

ಲಬ್ಧಾಲಬ್ಧಿ = ಲಾಭಾಲಾಭ
ಲಂಪಟ = ವಿಷಯಾಸಕ್ತ
ಲುಬ್ಧಿಸು = ಅತ್ಯಾಸೆ
ಲೋಚಿ = ನಿಯಂತ್ರಣವಿಲ್ಲದ
ಲೋಲ್ಯಾಡು = ಓಲಾಡು, ಮೆರೆ

## ವ

ವರ್ಮ = ಮರ್ಮ, ರಹಸ್ಯ
ವಸ್ತ್ರಾಮೋಲಿಕಾ= ಅಮೌಲ್ಯವಸ್ತ್ರ
ವೃಷ = ಗೂಳಿ, ಎತ್ತು
ವ್ಯಚ್ಚ = ವೆಚ್ಚ, ಖರ್ಚು
ವಾಲ್ಯಾಡು = ಓಲಾಡು
ವಾಲ್ಗೈಸು = ಓಲೈಸು, ಸೇವಿಸು
ವಾಸನೆ = ಇಚ್ಛೆ
ವ್ಯಾಳ್ಯ = ವೇಳೆ, ಸಮಯ
ವಿಕಳಿತ = ಕಳೆಗುಂದು, ಕಳವಳ

ವಿತ್ತ = ಧನ ಸಂಪತ್ತು
ವಿದಾರಣ = ಸಂಹಾರ
ವಿಟ್ಟಿಹ್ಯ = ಇಟ್ಟಿಹ, ಇಟ್ಟಿದ್ದ
ವಿಡಿ = ಪಿಡಿ, ಹಿಡಿ
ವಿರುಕಿತಿ = ವಿರಕ್ತಿ
ವ್ಯೆವ = ವ್ಯೆಯುವ, ತೆಗೆದುಕೊಂಡು ಹೋಗುವ

## ಷ

ಷಂಢ = ನಪುಂಸಕ

## ಸ

ಸರ್ಕನೆ = ಸರಕ್ಕನೆ, ಬೇಗನೆ
ಸಖರಿ = ಸಕ್ಕರೆ
ಸಥೆ = ಸಲುಗೆ
ಸದ್ಗೈಸು = ಒಳಿತನ್ನು ಮಾಡುವದು
ಸದೋದಿತ = ಸದಾ ಉದಯಿಸಿದ
ಸನ್ಮತ = ಒಪ್ಪಿಗೆ
ಸಬಕಾರ = ಸೋಪು
ಸಂಕಾರ = ಝುಂಕಾರ
ಸಂಚಿತ = ಸಂಗ್ರಹಿತ, ಗಳಿಸಿದ
ಸಂದಣಿ = ಸಮೂಹ
ಸಂದಲಿ = ಸಂಧಿಯಲಿ
ಸಂದುಕ = ಪೆಟ್ಟಿಗೆ
ಸಂಧ್ಯಾನ = ಸಂದ್ಯಾವಂದನೆ
ಸಂದಹರಿವ = ಗಂಟನ್ನು ಬಿಡಿಸುವ
ಸಂತ್ರಾಧಾರಿ = ಸಂತತಧಾರೆ
ಸಂಭ್ರಮ = ಆನಂದ
ಸ್ವಕೀಲ = ತನ್ನಗುಟ್ಟು, ಆತ್ಮದ ಅರಿವು
ಸ್ವಸ್ತ = ನೆಮ್ಮದಿ, ಶಾಂತಿ
ಸಾಜ = ಸಹಜ
ಸಾರ್ಥ = ಸಫಲ
ಸಾಭ್ಯಸ್ತ = ಉಚಿತ ರೀತಿ, ಹೊಂದಿಕೆ
ಸಾಮಜ = ಆನೆ
ಸಾರಾಯ = ಸಾರವತ್ತ, ರಸವತ್ತ
ಸಾಯಾಸ = ಆಯಾಸ
ಸಾರಣಿ = ಶುದ್ಧಮಾಡು
ಸಾಹ್ಯ = ಸಹಾಯ
ಸಾಂದ್ರ = ದಟ್ಟ
ಸ್ವಾದ = ರುಚಿ
ಸಾರ್‍ಯಲ್ಲ = ಸಮೀಪದ್ದಲ್ಲ
ಸಿರ = ತಲೆ
ಸುಆಗರ = ಒಳ್ಳೆಯ ಮನೆ
ಸಿಂಪು = ಚಿಪ್ಪು
ಸುಖಕಲ್ಲೋಳ = ಸುಖದ ಅಲೆಗಳ ಹೊಡೆತ
ಸುಗಡಿ = ಹೆಣ್ತನವಿಲ್ಲದ ಸ್ತ್ರೀ
ಸುತ್ಹಾನೆ = ಸುತ್ತ+ಹಾನೆ =ಸುತ್ತಲೂ ಇದ್ದಾನೆ
ಸೂಟಿ = ಉಪಾಯ
ಸೂತ್ರಾಂತ = ಸೂತ್ರದಲಿ ಅಡಗಿಸಿದ
ಸುಪ್ರಸ್ತ = ಹಬ್ಬದ ಭೋಜನ
ಸುಳವು = ಸುಳಿವು, ಚಿಹ್ನ, ಗುರುತು

ಸುಂದ್ರ = ಸುಂದರ

ಸುರಕಿ = ಸುರಕೋ ಸವಿಮಾಡಿಕೊ

ಸೂರ‍್ಯಾಡಿ = ಸೂರೆಮಾಡಿ

ಸೊಲಿಗೆ = ಧಾನ್ಯಅಳೆಯುವ ಒಂದು ಮಾನ

ಸೆರಗು = ಅಂಚು

ಸೋಜಿಗ = ಆಶ್ಚರ್ಯ

ಸೋಗು = ಸೋಂಗು ಬೂಟಾಟಿಕೆ

ಸೋಮಾರ್ಕ = ಚಂದ್ರ–ಸೂರ್ಯ

ಸೋಶಿಲೆ = ಶೋಧಿಸಿ

ಸೋಸ್ಥ = ಸ್ವಸ್ಥ

ಸೋಸು = ಶೋಧಿಸು

ಸೋಹ್ಯ = ಸೋಹಂ

ಸೋಂಕಿ = ತಟ್ಟಿ

## ಹ

ಹಗರಣ = ಪ್ರಕರಣ

ಹಚ್ಚಿ = ತೊಡಗಿ

ಹತ್ತಿಲೆ = ಹತ್ತಿರದ

ಹದನದಿ = ಚೆನ್ನಾಗಿ

ಹಮ್ಮು = ಅಹಂಕಾರ

ಹರಿ ಹರಿಸು = ನಿವಾರಿಸು

ಹರಿಗಡೆ = ನಿಲ್ಲು ಹರಿಕೆಡವು

ಹರುವ = ವಿಸ್ತಾರ ಹರಹ

ಹಡಕಿ = ಕೆಟ್ಟಿ, ಹೊಲಸು

ಹವಣಿಸು = ಪ್ರಯತ್ನಿಸು

ಹಸಕ = ಪಕ್ವವಲ್ಲದ

ಹಸಗೆಡು = ಹದಗೆಡು

ಹಳ = ಛೀ ತಿರಸ್ಕಾರವಾಚಕ

ಹಂಡೀಗತನ = ದುಂಡಾವರ್ತಿ

ಹಾಕ್ಯಾಡು = ವಾದಮಾಡು

ಹಾನೆ = ಇದ್ದಾನೆ

ಹ್ಯಾವ = ಅಹಂ

ಹುಯಿಲು = ರಚ್ಚು, ರಗಳೆ

ಹುಸಿ = ಸುಳ್ಳು

ಹೆಳವ = ಕುಂಟ

ಹೇತು = ಕಾರಣ ಉದ್ದೇಶ

ಹೇಳುದಲ್ಲ = ಹೇಳುವುದಲ್ಲ

ಹೇಸಿಕೆ = ಜುಗುಪ್ಸೆ

ಹೊತ್ತಿಗೆ = ಪುಸ್ತಕ

ಹೊಡಿ = ಹೊಡೆ

ಹೊಯಿಲು = ಕೂಗು, ಮೊರೆ

ಹೊಲಬು = ದಾರಿ

ಹೊರಸು = ಮಂಚ

ಹೊರಿ = ಹೊರೆ, ರಕ್ಷಿಸು

ಹೊರಿಯ = ಸುಮ್ಮನೆ

ಹೊರೆವ = ರಕ್ಷಿಸುವ

ಹೊಳಪು = ಕಾಂತಿ

ಹೊಂಡಹುಳ್ಳಿ = ಹೊಡಮರಳಿ, ಹಿಂತಿರುಗಿ

ಹೋಕು = ಮೋಸ

ಹೋಗುದೇನ = ಹೋಗುವದೇನು ? (ಏನೂ ಹೋಗುವುದಿಲ್ಲ)

ಹೋತು = ಹೋಯಿತು, ವ್ಯರ್ಥ

# ಅನುಬಂಧ–೨

## ಸಂಖ್ಯಾ ವಿಶಿಷ್ಟ ಪದಗಳು :

| | | |
|---|---|---|
| ತ್ರಿಕರಣ ಶುದ್ಧಿ | = | ಕಾಯಾ, ವಾಚಾ, ಮನಸಾ. |
| ಏಕಾಕ್ಷರ | = | ಓಂ ಎಂಬ ಬ್ರಹ್ಮ. |
| ಏಕೋಮಯ | = | ಒಬ್ಬನೇ ದೇವರು. |
| ತಾಪತ್ರಯಗಳು | = | ಆದಿಭೌತಿಕ, ಆದಿದೈವಿಕ, ಆದಿಆತ್ಮಿಕ. |
| ತ್ರಿಕರಣ ಶುದ್ಧಿ | = | ಕಾಯಾ, ವಾಚಾ, ಮನಸಾ. |
| ತ್ರಿಕಾಲ | = | ಪೂರ್ವಾಹ್ನ, ಮಧ್ಯಾಹ್ನ, ಅಪರಾಹ್ನ. |
| ತ್ರಿಗುಣ | = | ಸತ್ವ, ರಜ, ತಮ. |
| ತ್ರಿನಾಡಿ | = | ಇಡಾ, ಪಿಂಗಳ, ಸುಷುಮ್ನಾ. |
| ತ್ರಿಪುರ | = | ತ್ರಿಕೂಟ, ಶ್ರೀಪಾಟ, ಗೋಲ್ಲಾಟ. |
| ತ್ರಿಮೂರ್ತಿ | = | ಹರಿ, ಹರ, ಬ್ರಹ್ಮ |
| ತ್ರಿವಿಧ ಬಲೆ | = | ಹೆಣ್ಣು, ಹೊನ್ನು, ಮಣ್ಣು |
| ತ್ರಿಲೋಕ ತ್ರಿಭುವನ | = | ಸ್ವರ್ಗ, ಮರ್ತ್ಯ, ಪಾತಾಳ: |
| ನಾಲ್ಕು ಅವಸ್ಥೆಗಳು | = | ೧) ಜಾಗೃತಿ, ಸ್ವಪ್ನ, ಸುಷುಪ್ತಿ,ತುರೀಯ (ಯೌಗಿಕ).<br>೨) ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ. |
| ನಾಲ್ಕು ಮುಕ್ತಿಗಳು | = | ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ. |
| ನಾಲ್ಕು ವೇದಗಳು | = | ಋಗ್, ಯಜುರ್, ಸಾಮ, ಅಥರ್ವಣ. |
| ಪಂಚ ಅಗ್ನಿಗಳು | = | ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ, ಅವಸಥ್ಯ. |

| | | |
|---|---|---|
| ಪಂಚ ಆತ್ಮಗಳು | = | ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅವ್ಯಕ್ತ. |
| ಪಂಚ ಇಂದ್ರಿಯಗಳು | = | ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ, |
| ಪಂಚಪ್ರಾಣಗಳು, ಪಂಚವಾಯುಗಳು | = | ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ. |
| ಪಂಚ ಉಪವಾಯುಗಳು | = | ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜನಯ. |
| ಪಂಚ ಭಕ್ಷ್ಯಗಳು | = | ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ, ಪರಮಾನ್ನ. |
| ಪಂಚ ಭೂತಗಳು | = | ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ. |
| ಪಂಚ ಭೇದಗಳು | = | ಈಶ–ಜೀವ–ಜಡ, ಈಶ–ಜೀವ, ಜೀವ–ಜಡ, ಜೀವ–ಜೀವ, ಜಡ–ಜಡ. |
| ಪಂಚ ಮುದ್ರೆಗಳು | = | ೧)ಆವಾಹನಿ, ಸ್ಥಾಪನೀ, ಸನ್ನಿಧಾಪನೀ, ಸಂಬೋಧನೀ, ಸಮ್ಮುಖೀಕರಣೀ.<br>೨) ಶಂಖ, ಚಕ್ರ, ಗದಾ, ಪದ್ಮ, ನಾರಾಯಣ (ದ್ವೈತ). |
| ಪಂಚಾರತಿಗಳು | = | ದೀಪ, ಕಮಲ, ವಸ್ತ್ರ, ಪೂಗೀಫಲ, ಆಮ್ರ ಫಲ ಇವುಗಳು ಸಮಾಯೋಗ ಸಾಂಕೇತಿಕ ಐದು ದೀಪಗಳ ಆರತಿ, |
| ಎಂಟು ಅಂಗಗಳು (ಸಾಷ್ಟಾಂಗ) | = | ೧) ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ಶ್ರದ್ಧೆ, ಪಾದಗಳು, ಕೈಗಳು, ಕರಣಗಳು.(ಯೋಗ)<br>೨)ಯಮ, ನಿಯಮ, ಆಸನ ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ,ಧಾರಣ ಸಮಾಧಿ. |
| ಆರು ಚಕ್ರಗಳು | = | ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರ, ಅನಾಹತ. ವಿಶುದ್ಧ, ಆಜ್ಞಾ(ಯೌಗಿಕ). |

| | | |
|---|---|---|
| ಆರು ದರ್ಶನಗಳು | = | ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ. |
| ಆರು ರಿಪುಗಳು | = | ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ. |
| ಏಳುಧಾತುಗಳು | = | ಚರ್ಮ, ರುಧಿರ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ, ಶುಕ್ಲ. |
| ಏಳು ವ್ಯಸನಗಳು | = | ಜೂಜು, ಬೇಟೆ, ಕಳ್ಳು, ಮಾಂಸ ಕುತ್ಸಿತ, ವೇಶ್ಯೆ, ಪರದಾರ. |
| ಏಳುಸಾಗರಗಳು | = | ಲವಣ, ಪಯಸ್ಸು, ಸರ್ಪಿಸ್ಸು, ಗುಡ, ದಧಿ, ಶರ್ಕರಾ, ತೀರ್ಥವಾರಿ. |
| ಎಂಟು ಮದಗಳು | = | ಅನ್ನ, ಅರ್ಥ, ಸ್ತ್ರಿ, ವಿದ್ಯೆ, ಕುಲ, ರೂಪ, ಉದ್ಯೋಗ, ಯೌವನ. |
| ಎಂಟು ಸಿದ್ಧಿಗಳು | = | ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ. |
| ಒಂಭತ್ತು ನಿಧಿಗಳು | = | ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವ. |
| ಒಂಭತ್ತುವಿಧಭಕ್ತಿ | = | ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ |
| ಹತ್ತು ಅವತಾರಗಳು | = | ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ. |
| ಹತ್ತುನಾಡಿಗಳು | = | ಇಡಾ, ಪಿಂಗಳಾ, ಸುಷಮ್ನಾ, ಗಾಂಧಾರೀ, ಗಜಜಿಹ್ವಾ, ಪೂಷಾ, ಯಶಸ್ವಿನೀ, ಆಲಂಬುಷಾ, ಕುಹೂ, ಶಂಖಿನೀ |
| ಹತ್ತುಇಂದ್ರಿಯಗಳು | = | ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಪಾಣಿ, ಪಾದ, ವಾಯು, ಉಪಸ್ಥ. |
| ಚತುರ್ದಶ ಭುವನಗಳು (ಲೋಕಗಳು) | = | ಭೂಲೋಕ, ಭುವಲೋಕ, ಸ್ವಲೋಕ, ಮಹಲೋಕ, ಜನೋಲೋಕ, |

| | | |
|---|---|---|
| | | ತಪೋಲೋಕ, ಸತ್ಯಲೋಕ, ಸುತಲ,ಅತಳ, ವಿತಳ, ರಸಾತಲ, ತಲಾತಲ, ಮಹಾತಲ, ಪಾತಾಲ. |
| ಷೋಡಶಉಪಚಾರಗಳು | = | ಸ್ವಾಗತ, ಆಸನ, ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕ, ಸ್ನಾನ, ವಸ್ತ್ರಾಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ,ನೀರಾಜನ, ಪ್ರದಕ್ಷಿಣೆ, ನಮಸ್ಕಾರ. |
| ಅಷ್ಟಾದಶ ಪುರಾಣಗಳು | = | ಮತ್ಸ್ಯ, ಮಾರ್ಕಂಡೇಯ, ಭವಿಷ್ಯ, ಭಾಗವತ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ವಾಮನ, ವಾಯು, ವಿಷ್ಣು, ವರಾಹ, ಅಗ್ನಿ, ನಾರದ, ಪದ್ಮ,ಲಿಂಗ, ಗರುಡ, ಕೂರ್ಮ, ಸ್ಕಂದ. |
| ೨೧೬೦೦ ಜಪಗಳು | = | ಒಂದು ದಿನದಲ್ಲಿ ಮನುಷ್ಯ ಉಸಿರಾಡುವ ಸಂಖ್ಯೆ. |

# ಅನುಬಂಧ–೩

## ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಹೆಸರುಗಳು ಸಾಂದರ್ಭಿಕ ಪೌರಣಿಕ ವ್ಯಕ್ತಿಗಳು

| | | |
|---|---|---|
| ಕರಿವರ । ಕರಿಯ ಸೆರೆಯ | | |
| ಬಿಡಿಸಿದಾತ | = | ಗಜೇಂದ್ರನೆಂಬ ಆನೆಗೆ ಮೋಕ್ಷ ಕೊಟ್ಟದ್ದು |
| ಕಂಜಲೋಚನ | = | ತಾವರೆಯಂಥ ಕಣ್ಣುಳ್ಳ |
| ಕಾಮನೈಯ್ಯ | = | ಮನ್ಮಥನ ತಂದೆ |
| ಗಿರಿಯ ಬೆರಳೆತ್ತಿ | = | ಗೋವರ್ಧನ ಗಿರಿಯನೆತ್ತಿದ |
| ದಾಮೋದರ | = | ಉದರಕ್ಕೆ ಹಗ್ಗಿ ಬಿಗಿಸಿಕೊಂಡ |
| ನವನೀತಚೋರ | = | ಬೆಣ್ಣೆ ಕಳ್ಳ |
| ನಾಮತೇಲಿಸಿತು | = | ನೀರೊಳು |
| ಪರ್ವತ | = | ಕಪಿಗಳು ರಾಮನ ಹೆಸರಿನಿಂದ ಒಗೆದ ಕಲ್ಲುಗಳು ತೇಲಿ ಕಟ್ಟಿದ ಸೇತುಬಂಧ ಸಂದರ್ಭ |
| ಪಿತಾಮಹನ ಪಿತ | = | ಬ್ರಹ್ಮನ ತಂದೆ |
| ಬಲಿಯ ಬಾಗಿಲ ಕಾಯ್ದ | = | ತ್ರಿವಿಕ್ರಮನಾಗಿ ಬಲಿಯನ್ನು ಪಾತಾಳಕ್ಕೆ ಮೆಟ್ಟಿ ಅವನ ಭಕ್ತಿಗಾಗಿ ಅವನ ಮನೆಯ ಬಾಗಿಲ ಕಾಯ್ದ |
| ಬೊಮ್ಮನ ಪಡೆದಾತ | = | ಬ್ರಹ್ಮನನ್ನು ಪಡೆದವನು |
| ಮಾವನ ಮರ್ದನ | = | ಕಂಸನನ್ನು ಸಂಹರಿಸಿದ |
| ಮಾನವ ಮಾವನೊಳು | | |
| ಮಾವನಿತ್ತ ಮಣಿಯ ತಂದವನು | = | (ಮಾವ) ಸತ್ರಾಜಿತನ ಶ್ಯಮಂತಕ ಮಣಿಯನ್ನು (ಮಾವ) ಜಾಂಬವಂತನೊಂದಿಗೆ ಕಾದಿ ತಂದ ಕೃಷ್ಣ |

ಮುರಹರ = ಮುರನೆಂಬ ಅಸುರನನ್ನು ಕೊಂದ

ಮೈದುನ ಬೋವ = ಅರ್ಜುನನ ಸಾರಥಿ

ಶಿಲೆಗೆ ಉದ್ಧರಗತಿಯ ನಿತ್ತಾತ = ಗೌತಮ ಋಷಿಯ ಶಾಪದಿಂದ ಶಿಲೆಯಾದ ಅಹಲ್ಯೆಯನ್ನು ಉದ್ಧರಿಸಿದ

ಶೇಷಶಯನ = ಆದಿಶೇಷನ ಮೇಲೆ ಮಲಗಿದವ

ಸಾಮಗಾಯನ ಪ್ರಿಯ = ಸಾಮವೇದವನ್ನು ಮೆಚ್ಚಿದವ

ಸೋಮಶೇಖರ ಧ್ಯೇಯ = ಈಶ್ವರನ ಉಪಾಸ್ಯ

## ಇತರ

ಅಕ್ರೂರ = ಕಂಸನ ಅಷ್ಟಮಂತ್ರಿಗಳಲ್ಲಿ ಒಬ್ಬ. ಗೋಕುಲಕ್ಕೆ ಹೋಗಿ ಬಲರಾಮ, ಕೃಷ್ಣರನ್ನು ಕರೆತರುವಾಗ ದಾರಿಯಲ್ಲಿ ಕೃಷ್ಣನ ದಿವ್ಯದರ್ಶನ ಪಡೆದವ

ಅಜಮಿಳ = ಪರಮ ಪಾಪಿಯಾದ ಈತ ಅಂತ್ಯದಲ್ಲಿ ತನ್ನ ಮಗ ನಾರಾಯಣನನ್ನು 'ನಾರಗ' ಎಂದು ಕರೆದು ಮುಕ್ತಿಗಳಿಸಿದ (ನಾಮಮಹಿಮೆ)

ಅಂಗದ = ಕಪಿಶ್ರೇಷ್ಠ ವಾಲಿಯ ಮಗ, ವಾಲಿಯ ಸಂಹಾರದ ಅನಂತರ ರಾಮನು ಅಂಗದನಿಗೆ ರಾಜ್ಯಾಭಿಷೇಕ ಮಾಡಿದನು

ಅಂಬರೀಷ = ವಿಷ್ಣು ಭಕ್ತ, ದ್ವಾದಶಿ ಪಾರಣೆಯಂದು ಪರೀಕ್ಷಿಸಲು ಬಂದ ದೂರ್ವಾಸ ಮುನಿಗಳ ಶಾಪಕ್ಕೆ ಗುರಿಯಾದಾಗ, ದೂರ್ವಾಸರನ್ನು ಬೆನ್ನಟ್ಟಿ ಬಂದ ವಿಷ್ಣುವಿನ ಚಕ್ರಾಯುಧದಿಂದ ಪಾರಾಗಲು ಅವರು ಅಂಬರೀಷನನ್ನೆ ಮೊರೆಹೊಕ್ಕರು (ಭಕ್ತವತ್ಸಲನ ಮಹಿಮೆ)

ಉದ್ಧವ = ವಿಷ್ಣು ಭಕ್ತ, ಕೃಷ್ಣನ ಗೋಕುಲ ನಿರ್ಗಮನ ದಿಂದಾಗಿ ಪರಿತಪಿಸುತ್ತಿದ್ದ ಗೋಪಿಯರಿಗೆ ಸ್ವಾಂತನ ಹೇಳಲು ಕೃಷ್ಣನ ಪರವಾಗಿ ಹೋದ ವ್ಯಕ್ತಿ

ಉಪಮನ್ಯು = ಶಿವಭಕ್ತ

ಕುಬ್ಜೆ = ಕಂಸನ ಸ್ತ್ರೀ ಪರಿವಾರದಲ್ಲಿದ್ದ ಗೂನ ಸ್ತ್ರೀ

ಪುಂಡಲೀಕ = ವಿಷ್ಣುಭಕ್ತ, ತಂದೆಯ ಸೇವೆಗಾಗಿ ದೇವರನ್ನೂ ಕಾಯಿಸಿದ. ಪಿತೃಭಕ್ತ ಪರಮಾತ್ಮನ ಕೃಪೆಗೆ ಪಾತ್ರನಾದವನು.

ಬಲಿಚಕ್ರವರ್ತಿ = ಇಂದ್ರನನ್ನು ಗೆದ್ದು ಬಲಿಷ್ಠನಾಗಿದ್ದ ಬಲಿ ದಾನಶೂರ. ವಿಷ್ಣುವು ವಾಮನ ರೂಪದಿಂದ ಬಂದು ಮೂರು ಅಡಿ ಭೂಮಿಯನ್ನು ಕೇಳಿ ತ್ರಿವಿಕ್ರಮವಾಗಿ ಎರಡು ಅಡಿಗಳಲ್ಲಿ ಭೂಮಿ ಆಕಾಶಗಳನ್ನು ಪಡೆದು ಮೂರನೆಯ ಅಡಿಯಲ್ಲಿ ಬಲಿಯನ್ನು ಪಾತಾಳಕ್ಕೆ ಮೆಟ್ಟಿದ.

ಬಾಣಾಸುರ = ಶಿವಭಕ್ತ. ಈತನ ಮಗಳು ಉಷೆ, ಕೃಷ್ಣನ ಮೊಮ್ಮಗ ಅನಿರುದ್ಧ ಪರಸ್ಪರ ಅನುರಕ್ತ ರಾದಾಗ, ಬಾಣಾಸುರ, ಕೃಷ್ಣರಲ್ಲಿ ಯುದ್ಧ, ಬಾಣಾಸುರ ಹತನಾಗಿ ಕೃಷ್ಣನಿಗೆ ಶರಣು.

ಭಸ್ಮಾಸುರ = ಈಶ್ವರನಿಂದ ವರ ಪಡೆದವ, ಯಾರ ತಲೆ ಮೇಲೆ ಕೈ ಇಟ್ಟರೂ ಅವರು ಭಸ್ಮವಾಗುವ ವರದಿಂದ ಬೀಗಿ ಈಶ್ವರನ ಮೇಲೆಯೇ ಕೈ ಇಡಲು ಬಂದಾಗ ವಿಷ್ಣು ಮೋಹಿನಿ ರೂಪವನ್ನು ಧರಿಸಿ ಭಸ್ಮಾಸುರನು ತನ್ನ ಕೈಯನ್ನು ತನ್ನ ತಲೆಯ ಮೇಲೆಯೇ ಇಡುವಂತೆ ಮಾಡಿ ಸಂಹರಿಸಿದ.

ಭೃಗು = ಒಬ್ಬ ಋಷಿ, ಹರಿಹರ ಬ್ರಹ್ಮರಲ್ಲಿ ಯಾರು ಶ್ರೇಷ್ಠರೆಂದು ಪರೀಕ್ಷಿಸಲು ಹೋದಾಗ ಹರ-ಬ್ರಹ್ಮರು ಅವನನ್ನು ಗಮನಿಸದಿದ್ದಾಗ ಅವರ ಬಗೆ ಸಿಟ್ಟು ಲಕ್ಷ್ಮೀಸಮೇತನಾದ ಹರಿಯು ಸತ್ಕರಿಸಲು ಹರಿ ಸರ್ವೋತ್ತಮನೆಂದು ಸಾರಿದವ.

| | | |
|---|---|---|
| ರುಕ್ಮಾಂಗದ | = | ವಿಷ್ಣುಭಕ್ತ, ಏಕಾದಶಿ ವ್ರತನಿಷ್ಠ, ಅವನ ನಿಷ್ಠೆಯನ್ನು ಭಂಗ ಪಡಿಸಲು ಬ್ರಹ್ಮ ಮೋಹಿನಿಯನ್ನು ಕಳಿಸಿದನು. ಆಕೆಗೆ ಮರುಳಾಗದ ರುಕ್ಮಾಂಗದ ತನ್ನ ಮಗನನ್ನೆ ಬಲಿ ಕೊಡಲು ಸಿದ್ಧನಾಗಿ ಪರಮಾತ್ಮನಿಗೆ ಪ್ರಿಯನಾದನು. |
| ವಾಲಿ | = | ಕಪಿ ಶ್ರೇಷ್ಠರಲ್ಲಿಯ ಒಬ್ಬ. ಸುಗ್ರೀವನ ಅಣ್ಣ ರಾಮನಿಂದ ಹತನಾದ. |
| ಶುಕದೇವ | = | ವೇದವ್ಯಾಸರ ಪುತ್ರ. ಶುಕಮುನಿಗಳೆಂದೂ ಹೆಸರು |
| ಸರಸಿಜೋದ್ಭವ | = | ವಿಷ್ಣುವಿನ ನಾಭಿಯಲ್ಲಿ ಅರಳಿದ ಕಮಲದಲ್ಲಿ ಉದಯಿಸಿದ ಬ್ರಹ್ಮ |
| ಸಾಸಾರ್ಜುನ | = | ಸಹಸ್ರ ಬಾಹುಗಳುಳ್ಳ ಕಾರ್ತ್ಯವೀರ್ಯಾರ್ಜುನ ಜಮದಗ್ನಿ ಪುತ್ರ ಪರಶುರಾಮನಿಂದ ಹತ |
| ಸುದಾಮ | = | ಕೃಷ್ಣನ ಬಾಲ್ಯ ಸ್ನೇಹಿತ ಬಡವ, ಸ್ನೇಹಿತನ ಹಿಡಿ ಅವಲಕ್ಕಿಯನ್ನು ತಿಂದು ಕೃಷ್ಣ ಅಖಂಡ ಸಂಪತ್ತನ್ನು ಅನುಗ್ರಹಿಸಿದ. |

# ಅನುಬಂಧ–೪

## ಕೀರ್ತನೆಗಳ ಅಕಾರಾದಿ

| ಕ್ರಮ. ಸಂಖ್ಯೆ. | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೮ | ಇದೇ ಜ್ಞಾನವೋ ಇದೇ ಮಾನವೋ | ೩೬೦ |
| ೪೯ | ಇನ್ನೇನಿನ್ನೇನು ಎನಗಿನ್ನು | ೬೧೬ |
| ೫೦ | ಇಲ್ಲಿ ಉಂಟು ಮುಕುತಿ ನೋಡಿ | ೬೧೭ |
| ೫೧ | ಇಲ್ಲೆವೆ ನಿಧಾನವು ಶ್ರೀಗುರುವೆ | ೩೭೫ |
| ೫೨ | ಇವ ನಮ್ಮ ದಾತ ಅವಗುಣಧೂತ | ೩೭೬ |
| ೫೩ | ಇಂಥಾದ್ದಲ್ಲದೆ ತಾಂ ನೋಡಿ | ೬೧೮ |
| ೫೪ | ಇಂದಿನ ದಿನ ಸುದಿನವಿದು ನೋಡಿ | ೬೧೯ |
| ೫೫ | ಇಂದು ಎನ್ನ ಜನುಮ ಸಾಫಲ್ಯವಾಯಿತು | ೬೨೦ |
| ೫೬ | ಇಂದು ಕಂಡೆ ಕಣ್ಣಾರೆ ನನ್ನ ಸ್ವಾಮಿಯ | ೬೨೧ |
| ೫೭ | ಇಂದು ಕಂಡೆ ನಾ ಇಂದಿರಾಪತಿ | ೬೨೨ |
| ೫೮ | ಇಂದು ಕೂಡಿದೆವು ನಿಜ | ೬೨೩ |
| ೫೯ | ಇಂದು ಗುರುಪೂಜೆ ಮಾಡುವ | ೩೭೭ |
| ೬೦ | ಇಂದು ಧನ್ಯವಾಯಿತು ಜನುಮ | ೬೨೪ |
| ೬೧ | ಇಂದು ಧರಿಯೊಳು ಬ್ರಹ್ಮಾನಂದವನು ತುಂಬಿ | ೬೨೫ |
| ೬೨ | ಇಂದು ನಮ್ಮನಿಲಿ ಬ್ರಹ್ಮಾನಂದ | ೬೨೬ |
| ೬೩ | ಇಂದು ನಮ್ಮ ಮನಿಲಿ ಬ್ರಹ್ಮಾನಂದ | ೬೨೭ |
| ೬೪ | ಇಂದು ನಮ್ಮನಿಯಲಿ ಆನಂದ | ೬೨೮ |
| ೬೫ | ಇಂದು ನಮ್ಮ ಮನಿಲ್ಯಾನಂದ | ೬೨೯ |
| ೬೬ | ಇಂದು ನಮ್ಮ ಮನಿಲ್ಯಾನಂದೋಬ್ರಹ್ಮ | ೬೩೦ |
| ೬೭ | ಇಂದು ನೋಡುವ ಇಂದಿರಾಪತಿ ಶ್ರೀಪಾದವ | ೬೩೧ |
| ೬೮ | ಇಂದು ಮಂಗಳಕರ ದೋರಿತು ಎನಗೆ | ೬೩೨ |
| ೬೯ | ಇಂದು ಸುಕಾಲ ಸುಪರ್ವಕಾಲ | ೬೩೩ |
| ೭೦ | ಇಂದು ಸುದಿನ ಶುಭದಿವಸ ನೋಡಿ | ೬೩೪ |
| ೭೧ | ಇಂದು ಸುದಿವಸ ನೋಡಿ ಕಂಡೆವು | ೬೩೫ |
| ೭೨ | ಇಂದು ಶ್ರೀ ಗುರುಪಾದ ಪದ್ಮನೋಡುವ | ೩೭೮ |
| ೭೩ | ಇಂದು ಹೊಳೆವುತದೆ ಸುಚಿನ್ಹಬೋಧ | ೬೩೬ |
| ೭೪ | ಇಂದೆನ್ನ ಜನ್ಮ ಪಾವನವಾಯಿತು | ೬೩೭ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು